ಮಾಲಿನೀಂ । ಸೂರ್ಯಾಂ ಹಿರಣ್ಮಯೀಂ ಲಕ್ಷ್ಮೀಂ ಜಾತ ವೇದೋ ಮ ಆ ವಹ ॥ ತಾಂ ಮ ಆ ವಹ ಜಾತವೇದೋ ಲಕ್ಷ್ಮೀಮನಪಗಾಮಿನೀಂ । ಯಸ್ಯಾಂ ಹಿರಣ್ಯಂ ಪ್ರಭೂತಂ ಗಾವೋ ದಾಸ್ಯೋಽಶ್ವಾನ್ವಿಂದೇಯಂ ಪುರುಷಾನಹಂ ॥ ೧೫ ॥

ಯಃ ಶುಚಿಃ ಪ್ರಯತೋ ಭೂತ್ವಾ ಜುಹುಯಾದಾ ಜ್ಯಮನ್ವಹಂ । ಶ್ರಿಯಃ ಪಂಚದಶರ್ಚಂ ಚ ಶ್ರೀಕಾಮಸ್ಸತತಂ ಜಪೇತ್ ॥ ಪದ್ಮಾನನೇ ಪದ್ಮ ಊರೂ ಪದ್ಮಾಕ್ಷೀ ಪದ್ಮಸಂ ಭವೇ । ತನ್ಮೇ ಭಜಸಿ ಕಲ್ಯಾಣಿ ಯೇನ ಸೌಖ್ಯಂ ಲಭಾಮ್ಯಹಂ ॥ ಅಶ್ವದಾಯಿ ಗೋದಾಯಿ ಧನದಾಯಿ ಮಹಾಧನೇ ॥ ಧನಂ ಮೇ ಜುಷತಾಂ ದೇವಿ ಸರ್ವಕಾಮಾಂಶ್ಚ ದೇಹಿ ಮೇ । ಪುತ್ರಪೌತ್ರಧನಂ ಧಾನ್ಯಂ ಹಸ್ತ್ಯಶ್ವಾದಿಗವೇ ರಥಂ ॥ ಪ್ರಜಾನಾಂ ಭವಸಿ ಮಾತಾ ಆಯುಷ್ಮಂತಂ ಕರೋತು ಮಾಂ । ಧನಮಗ್ನಿರ್ಧನಂ ವಾಯುರ್ಧನಂ ಸೂರ್ಯೋ ಧನಂ ವಸುಃ । ಧನಮಿಂದ್ರೋ ಬೃಹಸ್ಪತಿ ರ್ವರುಣೋಧನಮಶ್ವಿನಾ ॥ ವೈನತೇಯ ಸೋಮಂ ಪಿಬ ಸೋಮಂ ಪಿಬತು ವೃತ್ರಹಾ । ಸೋಮಂ ಧನಸ್ಯ ಸೋಮಿನೋ ಮಹ್ಯಂ ದದಾತು ಸೋಮಿನಃ ॥ ನ ಕ್ರೋ

ಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ । ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಶ್ರೀಸೂಕ್ತಂ ಜಪೇತ್ಸದಾ ॥ ಸರಸಿಜನಿಲಯೇ ಸರೋಜಹಸ್ತೇ ಧವಳತರಾಂಶುಕಗಂಧಮಾಲ್ಯಶೋಭೇ । ಭಗವತಿ ಹರಿವಲ್ಲಭೇಮನೋಜ್ಞೇ ತ್ರಿಭುವನಭೂತಿಕರಿ ಪ್ರಸೀದ ಮಹ್ಯಂ ॥ ವಿಷ್ಣುಪತ್ನೀಂ ಕ್ಷಮಾಂ ದೇವೀಂ ಮಾಧವೀಂ ಮಾಧವಪ್ರಿಯಾಂ । ವಿಷ್ಣೋಃ ಪ್ರಿಯಸಖೀಂ ದೇವೀಂ ನಮಾಮ್ಯಚ್ಯುತವಲ್ಲಭಾಂ ॥ ಮಹಾಲಕ್ಷ್ಮ್ಯೈ ಚ ವಿದ್ಮಹೇ ವಿಷ್ಣುಪತ್ನ್ಯೈ ಚ ಧೀಮಹಿ । ತನ್ನೋ ಲಕ್ಷ್ಮೀಃ ಪ್ರಚೋದಯಾತ್ ॥ ಪದ್ಮಾಸನೇ ಪದ್ಮಿನಿ ಪದ್ಮಪತ್ರೇ ಪದ್ಮಪ್ರಿಯೇ ಪದ್ಮದಳಾಯತಾಕ್ಷಿ । ವಿಶ್ವಪ್ರಿಯೇ ವಿಷ್ಣುಮನೋಽನುಕೂಲೇ ತ್ವತ್ಪಾದಪದ್ಮಂ ಮಯಿ ಸಂನಿಧತ್ಸ್ವ ॥ ಯಾ ಸಾ ಪದ್ಮಾಸನಸ್ಥಾ ವಿಪುಲಕಟಿತಟೀ ಪದ್ಮಪತ್ರಾಯತಾಕ್ಷೀ ಗಂಭೀರಾವರ್ತನಾಭಿಸ್ತನಭರನಮಿತಾ ಶುಭ್ರವಸ್ತ್ರೋತ್ತರೀಯಾ । ಲಕ್ಷ್ಮೀರ್ದಿವ್ಯೈರ್ಗಜೇಂದ್ರೈರ್ಮಣಿಗಣಖಚಿತೈಸ್ಸ್ನಾಪಿತಾ ಹೇಮಕುಂಭೈರ್ನಿತ್ಯಂ ಸಾ ಪದ್ಮಹಸ್ತಾ ವಸತು ಮಮ ಗೃಹೇ ಸರ್ವಮಾಂಗಲ್ಯಯುಕ್ತಾ ॥ ಆನಂದಕರ್ದಮಃ ಶ್ರೀದಶ್ಚಿಕ್ಲೀತ ಇವ ವಿಶ್ರುತಃ । ಋಷಯ

ಶ್ರಿಯಃಪುತ್ರಾಶ್ಚ ಶ್ರೀರ್ದೇವೀರ್ದೇವತಾಶ್ರಿಯಾ || ಶ್ರೀವರ್ಚಸ್ಯಮಾಯುಷ್ಯಮಾರೋಗ್ಯಮಾವಿಧಾತ್ಪವಮಾನಂ ಮಹೀಯತೇ । ಧನಂ ಧಾನ್ಯಂ ಪಶುಂ ಬಹುಪುತ್ರಲಾಭಂ ಶತಸಂವತ್ಸರಂ ದೀರ್ಘಮಾಯುಃ ||

|| ಇತಿ ಶ್ರೀಸೂಕ್ತಂ ||

## || ದುರ್ಗಾಸೂಕ್ತಂ ||

ಓಂ ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ||೧|| ತಾಮಗ್ನಿವರ್ಣಾಂ ತಪಸಾ ಜ್ವಲಂತೀಂ ವೈರೋಚನೀಂ ಕರ್ಮಫಲೇಷು ಜುಷ್ಟಾಂ । ದುರ್ಗಾಂ ದೇವೀಗ್ಂ ಶರಣಮಹಂ ಪ್ರಪದ್ಯೇ ಸುತರಸಿ ತರಸೇ ನಮಃ ||೨|| ಅಗ್ನೇ ತ್ವಂ ಪಾರಯಾ ನವ್ಯೋ ಅಸ್ಮಾನ್ತ್ಸ್ವಸ್ತಿಭಿರತಿ ದುರ್ಗಾಣಿ ವಿಶ್ವಾ । ಪೂಶ್ಚ ಪೃಥ್ವೀ ಬಹುಲಾ ನ ಉರ್ವೀ ಭವಾ ತೋಕಾಯ ತನಯಾಯ ಶಂಯೋಃ ||೩||

ವಿಶ್ವಾನಿ ನೋ ದುರ್ಗಹಾ ಜಾತವೇದಃ ಸಿಂಧುಂ ನ ನಾವಾ
ದುರಿತಾತಿಪರ್ಷಿ । ಅಗ್ನೇ ಅತ್ರಿವನ್ಮನಸಾ ಗೃಣಾನೋಽಸ್ಮಾಕಂ
ಬೋಧ್ಯವಿತಾ ತನೂನಾಂ ॥ ೪ ॥ ಪೃತನಾಜಿತಗ್ಂ ಸಹಮಾನ-
ಮುಗ್ರಮಗ್ನಿಗ್ಂ ಹುವೇಮ ಪರಮಾತ್ಸಧಸ್ಥಾತ್ । ಸ ನಃ
ಪರ್ಷದತಿ ದುರ್ಗಾಣಿ ವಿಶ್ವಾ ಕ್ಷಾಮದ್ದೇವೋ ಅತಿ-
ದುರಿತಾತ್ಯಗ್ನಿಃ ॥ ೫ ॥ ಪ್ರತ್ನೋಷಿ ಕಮೀಡ್ಯೋ ಅಧ್ವರೇಷು
ಸನಾಚ್ಚ ಹೋತಾ ನವ್ಯಶ್ಚ ಸತ್ಸಿ । ಸ್ವಾಂ ಚಾಗ್ನೇ
ತನುವಂ ಪಿಪ್ರಯಸ್ವಾಸ್ಮಭ್ಯಂ ಚ ಸೌಭಗಮಾಯಜಸ್ವ ॥ ೬ ॥
ಗೋಭಿರ್ಜುಷ್ಟಮಯುಜೋ ನಿಷಿಕ್ತಂ ತವೇಂದ್ರ ವಿಷ್ಣೋ-
ರನುಸಂಚರೇಮ । ನಾಕಸ್ಯ ಪೃಷ್ಠಮಭಿ ಸಂವಸಾನೋ
ವೈಷ್ಣವೀಂ ಲೋಕ ಇಹ ಮಾದಯಂತಾಂ ॥ ೭ ॥

॥ ಇತಿ ದುರ್ಗಾಸೂಕ್ತಂ ॥

———

# ॥ ಅಥ ತ್ರಿಪುರೋಪನಿಷತ್* ॥

ಓಂ :—ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಂ । ಆವಿರಾವೀರ್ಮ ಏಧಿ । ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನ । ಅಹೋರಾತ್ರಾನ್ ಸಂದಧಾಮ್ಯೃತಂ ವದಿಷ್ಯಾಮಿ। ಸತ್ಯಂ ವದಿಷ್ಯಾಮಿ । ತನ್ಮಾಮವತು। ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಂ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ ತಿಸ್ರಃ ಪುರಸ್ತ್ರಿಪಥಾ ವಿಶ್ವಚರ್ಷಣಾ ಅತ್ರಾಕಥಾ ಅಕ್ಷರಾಃ ಸಂನಿವಿಷ್ಟಾಃ । ಅಧಿಷ್ಠಾಯೈನಾ ಅಜರಾ ಪುರಾಣೀ ಮಹತ್ತರಾ ಮಹಿಮಾ ದೇವತಾನಾಂ ॥ ೧ ॥

ನವಯೋನಿಂ ನವಚಕ್ರಾಣಿ ದೀಧಿರೇ ನವೈವ ಯೋಗಾ ನವಯೋಗಿನ್ಯಶ್ಚ । ನವಾನಾಂ ಚಕ್ರಾ ಅಧಿನಾಥಾಃ ಸ್ಯೋನಾ ನವಭದ್ರಾ ನವ ಮುದ್ರಾಮಹೀನಾಂ ॥ ೨ ॥

ಏಕಾ ಸ ಆಸೀತ್ಪ್ರಥಮಾ ಸಾ ನವಾಸೀದಾಸೋನವಿಂಶಾ ದಾಸೋನತ್ರಿಂಶಾತ್ । ಚತ್ವಾರಿಂಶಾದಥ ತಿಸ್ರಃ ಸಮಿಧಾ ಉಶತೀರಿವ ಮಾತರೋ ಮಾ ವಿಶಂತು ॥ ೩ ॥

ಊರ್ಧ್ವಜ್ವಲನಂ ಜ್ಯೋತಿರಗ್ರೇ ತಮೋ ವೈ ತಿರಶ್ಚೀನಮಜರಂ ತದ್ರಜೋಽಭೂತ್ । ಆನಂದನಂ ಮೋದನಂ ಜ್ಯೋತಿರಿಂದೋರೇತಾ ಉ ವೈ ಮಂಡಲಾ ಮಂಡಯಂತಿ ॥ ೪ ॥

---

*ಈ ಉಪನಿಷತ್ತು ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೨ (ವೇದ ಪರಿಷನ್ಮಾಲಾ)ದಲ್ಲಿ ಕನ್ನಡ ಅನುವಾದಸಹಿತ ಮುದ್ರಿಸಲ್ಪಟ್ಟಿದೆ.

ಯಾಸ್ತಿಸ್ರೋ ರೇಖಾಃ ಸದನಾನಿ ಭೂಸ್ತ್ರೀಸ್ತ್ರಿವಿಷ್ಟಪಾಸ್ತ್ರಿಗುಣಾಸ್ತ್ರಿಪ್ರಕಾರಾಃ । ಏತತ್ತ್ರಯಂ ಪೂರಕಂ ಪೂರಕಾಣಾಂ ಮಂತ್ರಪ್ರತತೇ ಮದನೋ ಮದನ್ಯಾ ॥ ೫ ॥

ಮದಂತಿಕಾ ಮಾನಿನೀ ಮಂಗಲಾ ಚ ಸುಭಗಾ ಚ ಸಾ ಸುಂದರೀ ಸಿದ್ಧಿಮತ್ತಾ । ಲಜ್ಜಾ ಮತಿಸ್ತುಷ್ಟಿರಿಷ್ಟಾ ಚ ಪುಷ್ಟಾ ಲಕ್ಷ್ಮೀರುಮಾ ಲಲಿತಾ ಲಾಲಪಂತೀ ॥ ೬ ॥

ಇಮಾಂ ವಿಜ್ಞಾಯ ಸುಧಯಾ ಮದನ್ತೀ ಪರಿಸೃತಾ ತರ್ಪಯನ್ತಃ ಸ್ವಪೀಠಂ । ನಾಕಸ್ಯ ಪೃಷ್ಠೇ ಮಹತೋ ವಸನ್ತಿ ಪರಂ ಧಾಮ ತ್ರೈಪುರಂ ಚಾವಿಶನ್ತಿ ॥ ೭ ॥

ಕಾಮೋ ಯೋನಿಃ ಕಾಮಕಲಾ ವಜ್ರಪಾಣಿರ್ಗುಹಾಹಸಾ ಮಾತರಿಶ್ವಾಭ್ರಮಿನ್ದ್ರಃ । ಪುನರ್ಗುಹಾ ಸಕಲಾ ಮಾಯಯಾ ಚ ಪುರೂ ಜ್ಯೇಷಾ ವಿಶ್ವಮಾತಾऽऽದಿವಿದ್ಯಾ ॥ ೮ ॥

ಷಷ್ಠಂ ಸಪ್ತಮಮಥ ವಹ್ನಿಸಾರಥಿಮಸ್ಯಾ ಮೂಲತ್ರಿಕಮಾದೇಶಯನ್ತಃ। ಕಥ್ಯಂ ಕವಿಂ ಕಲ್ಪಕಂ ಕಾಮಮೀಶಂ ತುಷ್ಟುವಾಂಸೋ ಅಮೃತತ್ವಂ ಭಜನ್ತೇ ॥ ೯ ॥

ಪುರಂ ಹನ್ತ್ರೀಮುಖಂ ವಿಶ್ವಮಾತೂ ರವೇರೇಖಾ ಸ್ವರಮಧ್ಯಂ ತದೇಷಾ । ಬೃಹತ್ತಿಥಿರ್ದಶಪಂಚಾದಿನಿತ್ಯಾ ಸಷೋಡಶಿಕಂ ಪುರಮಧ್ಯಂ ಬಿಭರ್ತಿ ॥ ೧೦ ॥

ಯದ್ವಾ ಮಣ್ಡಲಾದ್ವಾ ಸ್ತನಬಿಮ್ಬಮೇಕಂ ಮುಖಂ ಚಾಧಸ್ತ್ರೀಣಿ ಗುಹಾ ಸದನಾನಿ । ಕಾಮೀ ಕಲಾಂ ಕಾಮರೂಪಾಂ ಚಿಕಿತ್ವಾ ನರೋ ಜಾಯತೇ ಕಾಮರೂಪಶ್ಚ ಕಾಮ್ಯಃ ॥ ೧೧ ॥

ಪರಿಸ್ರುತಂ ಝಷಮಾಜಂ ಪಲಂ ಚ ಭಕ್ತಾನಿ ಯೋನೀಃ ಸುಪರಿಷ್ಕೃತಾಶ್ಚ । ನಿವೇದಯನ್ ದೇವತಾಯೈ ಮಹತ್ಯೈ ಸ್ವಾತ್ಮೀಕೃತೇಸುಕೃತೇ ಸಿದ್ಧಿಮೇತಿ ॥೧೨॥

ಸೃಣ್ಯೇವ ಸಿತಯಾ ವಿಶ್ವಚರ್ಷಣಿಃ ಪಾಶೇನೈವ ಪ್ರತಿಬಧ್ನಾ-ತ್ಯಭೀಕಾನ್ । ಇಷುಭಿಃ ಪಂಚಭಿರ್ಧನುಷಾ ಚ ವಿಧ್ಯತ್ಯಾದಿಶಕ್ತಿ-ರರುಣಾ ವಿಶ್ವಜನ್ಯಾ ॥೧೩॥

ಭಗಃ ಶಕ್ತಿರ್ಭಗವಾನ್ ಕಾಮ ಈಶ ಉಭಾ ದಾತಾರಾವಿಹ ಸೌಭಗಾನಾಂ ॥ ಸಮಪ್ರಧಾನೌ ಸಮಸತ್ತ್ವೌ ಸಮೋಜೌ । ತಯೋಃ ಶಕ್ತಿರಜರಾ ವಿಶ್ವಯೋನಿಃ ॥ ೧೪ ॥

ಪರಿಸ್ರುತಾ ಹವಿಷಾ ಭಾವಿತೇನ ಪ್ರಸಂಕೋಚೇ ಗಲಿತೇ ವೈ ಮನಸ್ಕಃ । ಶರ್ವಃ ಸರ್ವಸ್ಯ ಜಗತೋ ವಿಧಾತಾ ಧರ್ತಾ ಹರ್ತಾ ವಿಶ್ವರೂಪತ್ವಮೇತಿ ॥೧೫॥

ಇಯಂ ಮಹೋಪನಿಷತ್ತ್ರೈಪುರ್ಯಾ ಯಾಮಕ್ಷಯಂ ಪರಮಾ ಗೀರ್ಭಿರೀಟ್ಟೇ । ಏಷರ್ಗ್ಯಜುಃ ಪರಮೇತಚ್ಚ ಸಾಮಾ ಯಮಥ-ರ್ವೇಯಮನ್ಯಾ ಚ ವಿದ್ಯಾ ॥ ೧೬ ॥

ಓಂ ಹ್ರೀಮೋಂ ಹ್ರೀಮಿತ್ಯುಪನಿಷತ್ ॥೧೭॥

ಓಂ:—ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಂ । ಆವಿರಾವೀರ್ಮ ಏಧಿ । ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನ । ಅಹೋರಾತ್ರಾನ್ ಸಂದ ಧಾಮ್ಯೃತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ । ತನ್ಮಾಮವತು ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಂ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಇತಿ ತ್ರಿಪುರೋಪನಿಷತ್ಸಮಾಪ್ತಾ ॥

# ॥ ಅಥ ಬಹ್ವೃಚೋಪನಿಷತ್* ॥

ಓಂ:—ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಂ । ಆವಿರಾವೀರ್ಮ ಏಧಿ । ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನ । ಅಹೋರಾತ್ರಾನ್ ಸಂದ ಧಾಮ್ಯೃತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ । ತನ್ಮಾಮವತು ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಂ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ ದೇವೀ ಹ್ಯೇಕಾಗ್ರ ಆಸೀತ್ । ಸೈವ ಜಗದಂಡಮಸೃಜತ । ಕಾಮಕಲೇತಿ ವಿಜ್ಞಾಯತೇ । ಶೃಙ್ಗಾರಕಲೇತಿ ವಿಜ್ಞಾಯತೇ ॥ ೧॥

ತಸ್ಯಾ ಏವ ಬ್ರಹ್ಮಾಽಜೀಜನತ್ । ವಿಷ್ಣುರಜೀಜನತ್ । ರುದ್ರೋಽಜೀಜನತ್। ಸರ್ವೇ ಮರುದ್ಗಣಾ ಅಜೀಜನನ್। ಗಂಧರ್ವಾಪ್ಸರಸಃ ಕಿನ್ನರಾ ವಾದಿತ್ರವಾದಿನಃ ಸಮಂತಾದಜೀಜನನ್ । ಭೋಗ್ಯಮಜೀಜನತ್ । ಸರ್ವಮಜೀಜನತ್ । ಸರ್ವಂ ಶಾಕ್ತಮಜೀಜನತ್ । ಅಂಡಜಸ್ವೇದಜಮುದ್ಭಿಜ್ಜಂ ಜರಾಯುಜಂ ಯತ್ಕಿಂಚೈತತ್ಪ್ರಾಣಿಸ್ಥಾವರಜಂಗಮಂ ಮನುಷ್ಯಮಜೀಜನತ್ ॥ ೨ ॥

ಸೈಷಾ ಪರಾ ಶಕ್ತಿಃ । ಸೈಷಾ ಶಾಂಭವೀ ವಿದ್ಯಾ ಕಾದಿವಿದ್ಯೇತಿ ವಾ ಹಾದಿವಿದ್ಯೇತಿ ವಾ ಸಾದಿವಿದ್ಯೇತಿ ವಾ ರಹಸ್ಯಮೋಮೋಂ ವಾಚಿ ಪ್ರತಿಷ್ಠಾ ॥ ೩ ॥

ಸೈವ ಪುರತ್ರಯಂ ಶರೀರತ್ರಯಂ ವ್ಯಾಪ್ಯ ಬಹಿರಂತರವಭಾಸಯಂತೀ ದೇಶಕಾಲವಸ್ತ್ವಂತರಾಸಂಗಾನ್ಮಹಾತ್ರಿಪುರಸುಂದರೀ ವೈ ಪ್ರತ್ಯಕ್ಚಿತಿಃ ॥ ೪ ॥

---

* ಈ ಉಪನಿಷತ್ತು ಶ್ರೀಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೨ (ದೇವ್ಯುಪನಿಷನ್ಮಾಲಾ) ರಲ್ಲಿ ಕನ್ನಡ ಅನುವಾದಸಹಿತ ಮುದ್ರಿಸಲ್ಪಟ್ಟಿದೆ.

ಸೈವಾತ್ಮಾ ತತೋಽನ್ಯದಸತ್ಯಮನಾತ್ಮಾ । ಅತ ಏಷಾ ಬ್ರಹ್ಮಸಂವಿತ್ತಿರ್ಭಾವಾಭಾವಕಲಾವಿನಿರ್ಮುಕ್ತಾ ಚಿದ್ವಿದ್ಯಾ ದ್ವಿತೀಯಾ ಬ್ರಹ್ಮಸಂವಿತ್ತಿಃ । ಸಚ್ಚಿದಾನಂದಲಹರೀ ಮಹಾತ್ರಿಪುರಸುಂದರೀ ಬಹಿರಂತರನುಪ್ರವಿಶ್ಯ ಸ್ವಯಮೇಕೈವ ವಿಭಾತಿ । ಯದಸ್ತಿ ಸನ್ಮಾತ್ರಂ । ಯದ್ಭಾತಿ ಚಿನ್ಮಾತ್ರಂ ಪ್ರಿಯಮಾನಂದಂ । ತದೇತತ್ ಸರ್ವಾಕಾರಾ ಮಹಾತ್ರಿಪುರಸುಂದರೀ । ತ್ವಂ ಚಾಹಂ ಚ ಸರ್ವಂ ವಿಶ್ವಂ ಸರ್ವದೇವತಾ । ಇತರತ್ಸರ್ವಂ ಮಹಾತ್ರಿಪುರಸುಂದರೀ । ಸತ್ಯಮೇಕಂ ಲಲಿತಾಖ್ಯಂ ವಸ್ತು ತದದ್ವಿತೀಯಮಖಂಡಾರ್ಥಂ ಪರಂಬ್ರಹ್ಮ ॥ ೫ ॥

ಪಂಚರೂಪಪರಿತ್ಯಾಗಾ ದರ್ವರೂಪಪ್ರಹಾಣತಃ । ಅಧಿಷ್ಠಾನಂ ಪರಂ ತತ್ತ್ವಮೇಕಂ ಸಚ್ಛಿಷ್ಯತೇ ಮಹತ್ ॥ ೬ ॥

ಪ್ರಜ್ಞಾನಂ ಬ್ರಹ್ಮೇತಿ ವಾ ಅಹಂ ಬ್ರಹ್ಮಾಸ್ಮೀತಿ ವಾ ಭಾಷ್ಯತೇ ತತ್ತ್ವಮಸೀತ್ಯೇವ ಸಂಭಾಷ್ಯತೇ । ಅಯಮಾತ್ಮಾ ಬ್ರಹ್ಮೇತಿ ವಾ ಅಹಂ ಬ್ರಹ್ಮಾಸ್ಮೀತಿ ವಾ ಬ್ರಹ್ಮೈವಾಹಮಸ್ಮೀತಿ ವಾ ॥ ೭ ॥

ಯೋಽಹಮಸ್ಮೀತಿ ವಾ ಸೋಽಹಮಸ್ಮೀತಿ ವಾ ಯೋಽಸೌ ಸೋಽಹಮಸ್ಮೀತಿ ವಾ ಯಾ ಭಾವ್ಯತೇ ಸೈಷಾ ಷೋಡಶೀ ಶ್ರೀವಿದ್ಯಾ ಪಂಚದಶಾಕ್ಷರೀ ಶ್ರೀಮಹಾತ್ರಿಪುರಸುಂದರೀ ಬಾಲಾಂಬಿಕೇತಿ ಬಗಲೇತಿ ವಾ ಮಾತಂಗೀ ಸ್ವಯಂವರಕಲ್ಯಾಣೀತಿ ಭುವನೇಶ್ವರೀತಿ ಚಾಮುಂಡೇತಿ ಚಂಡೇತಿ ವಾರಾಹೀತಿ ತಿರಸ್ಕರಿಣೀತಿ ರಾಜಮಾತಂಗೀತಿ ವಾ ಶುಕ್ಲಶಾಮಲೇತಿ ವಾ ಲಘುಶ್ಯಾಮಲೇತಿ ವಾ ಅಶ್ವಾರೂಢೇತಿ ವಾ ಪ್ರತ್ಯಂಗಿರಾ ಧೂಮಾವತೀ ಸಾವಿತ್ರೀ ಸರಸ್ವತೀ ಗಾಯತ್ರೀ ಬ್ರಹ್ಮಾನಂದಕಲೇತಿ ॥ ೮ ॥

ಋಚೋ ಅಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥ ಇತ್ಯುಪನಿಷತ್ ॥ ೯ ॥

ಓಂ :— ವಾಙ್ಮೇ ಮನಸಿ ಪ್ರತಿಷ್ಠಿತಾ । ಮನೋ ಮೇ ವಾಚಿ ಪ್ರತಿಷ್ಠಿತಂ । ಆವಿರಾವೀರ್ಮ ಏಧಿ । ವೇದಸ್ಯ ಮ ಆಣೀಸ್ಥಃ ಶ್ರುತಂ ಮೇ ಮಾ ಪ್ರಹಾಸೀರನೇನಾಧೀತೇನ । ಅಹೋರಾತ್ರಾನ್ ಸಂದಧಾಮ್ಯೃತಂ ವದಿಷ್ಯಾಮಿ। ಸತ್ಯಂ ವದಿಷ್ಯಾಮಿ । ತನ್ಮಾಮವತು। ತದ್ವಕ್ತಾರಮವತು । ಅವತು ಮಾಮವತು ವಕ್ತಾರಮವತು ವಕ್ತಾರಂ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಇತಿ ಬಹ್ವೃಚೋಪನಿಷತ್ಸಮಾಪ್ತಾ ॥

— —

## ॥ಅಥ ಅಥರ್ವಣವೇದೀಯ ದೇವ್ಯುಪನಿಷತ್* ॥

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ। ಸ್ಥಿರೈರಂಗೈಸ್ತುಷ್ಟುವಾಗ್ಂ ಸಸ್ತನೂಭಿಃ। ವ್ಯಶೇಮ ದೇವಹಿತಂ ಯದಾಯುಃ। ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ। ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿ ರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಓಂ॥ ಸರ್ವೇ ವೈ ದೇವಾ ದೇವೀಮುಪತಸ್ಥುಃ । ಕಾಽಸಿ ತ್ವಂ ಮಹಾದೇವಿ ? ॥ ೧ ॥

---

*ಈ ಉಪನಿಷತ್ತು ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೪ (ಪಂಚೋಪನಿಷದಃ) ರಲ್ಲಿ ಕನ್ನಡ ಅನುವಾದಸಹಿತ ಮುದ್ರಿಸಲ್ಪಟ್ಟಿದೆ.

ಸಾಽಬ್ರವೀದಹಂ ಬ್ರಹ್ಮಸ್ವರೂಪಿಣೀ। ಮತ್ತಃ ಪ್ರಕೃತಿಪುರು-ಷಾತ್ಮಕಂ ಜಗತ್, ಶೂನ್ಯಂ ಚಾಶೂನ್ಯಂ ಚ ॥ ೨ ॥

ಅಹಮಾನಂದಾನಾನಂದಾಃ, ಅಹಂ ವಿಜ್ಞಾನಾವಿಜ್ಞಾನೇ, ಅಹಂ ಬ್ರಹ್ಮಾಬ್ರಹ್ಮಣೀ, ವೇದಿತವ್ಯೇ, ಇತ್ಯಾಹಾಥರ್ವಶ್ರುತಿಃ ॥ ೩ ॥

ಅಹಂ ಪಂಚಭೂತಾನ್ಯಪಂಚಭೂತಾನಿ, ಅಹಮಖಿಲಂಜಗತ್ ವೇದೋಽಹಮವೇದೋಽಹಂ, ವಿದ್ಯಾಹಮವಿದ್ಯಾಹಂ, ಅಜಾಹಮನ ಜಾಹಂ, ಅಧಶ್ಚೋರ್ಧ್ವಂ ಚ ತಿರ್ಯಕ್ಚಾಹಂ ॥ ೪ ॥

ಅಹಗ್ಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತವಿಶ್ವ-ದೇವೈಃ। ಅಹಂ ಮಿತ್ರಾವರುಣಾವುಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನಾವುಭೌ ॥ ೫ ॥

ಅಹಗ್ಂ ಸೋಮಂ ತ್ವಷ್ಟಾರಂ ಪೂಷಣಂ ಭಗಂ ದಧಾಮ್ಯಹಂ। ವಿಷ್ಣುಮುರು ಕ್ರಮಂ ಬ್ರಹ್ಮಾಣಮುತ ಪ್ರಜಾಪತಿಂ ದಧಾಮಿ ॥ ೬ ॥

ಅಹಂದಧಾಮಿ ದ್ರವಿಣಗ್ಂ ಹವಿಷ್ಮತೇ ಸುಪ್ರಾವ್ಯೇ ಯಜ-ಮಾನಾಯ ಸುನ್ವತೇ। ಅಹಗ್ಂ ರಾಷ್ಟ್ರೀ ಸಂಗಮನೀ ವಸೂ-ನಾಮಹಗ್ಂಸುವೇ ಪಿತರಮಸ್ಯ ಮೂರ್ಧನ್। ಮಮ ಯೋನಿ-ರಪ್ಸ್ವಂತಸ್ಸಮುದ್ರೇ ಯ ಏವಂ ವೇದ ಸ ದೇವೀಪದಮಾಪ್ನೋತಿ॥೭॥

ತೇ ದೇವಾ ಅಬ್ರುವನ್। ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ। ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಸ್ಸ್ಮ ತಾಂ ॥ ೮ ॥

ತಾಮಗ್ನಿವರ್ಣಾಂ ತಪಸಾ ಜ್ವಲಂತೀಂ ವೈರೋಚನೀಂ ಕರ್ಮ ಫಲೇಷು ಜುಷ್ಟಾಂ। ದುರ್ಗಾಂ ದೇವೀಗ್ಂ ಶರಣಮಹಂ ಪ್ರಪದ್ಯೇ (ಸುತರಸಿತರಸೇನಮಃ) ಸುತರಾಂ ನಾಶಯತೇ ತಮಃ ॥ ೯ ॥

ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ । ಸಾನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ॥ ೯ ॥

ಕಾಳರಾತ್ರಿಂ ಬ್ರಹ್ಮಸ್ತುತಾಂ ವೈಷ್ಣವೀಗ್ಂ ಸ್ಕಂದಮಾತರಂ ।
ಸರಸ್ವತೀಮದಿತಿಂ ದಕ್ಷದುಹಿತರಂ ನಮಾಮಃ ಪಾವನಾಗ್ ಶಿವಾಂ ॥

ಮಹಾಲಕ್ಷ್ಮ್ಯೈ ಚ ವಿದ್ಮಹೇ ಸರ್ವಸಿದ್ಧ್ಯೈ ಚ ಧೀಮಹಿ ।
ತನ್ನೋ ದೇವೀ ಪ್ರಚೋದಯಾತ್ ॥ ೧೧ ॥

ಅದಿತಿರಿಹ ಜನಿಷ್ಟ ದಕ್ಷಯಾ ದುಹಿತಾ ತವ, ತಾಂ ದೇವಾ ಅನ್ವಜಾಯನ್ತ ಭದ್ರಾ ಅಮೃತಬಂಧವಃ ॥ ೧೨ ॥

ಕಾಮೋ ಯೋನಿಃ ಕಾಮಕಲಾ ವಜ್ರಪಾಣಿರ್ಗುಹಾ ಹಸ ಮಾತರಿಶ್ವಾಭ್ರಮಿಂದ್ರಃ । ಪುನರ್ಗುಹಾ ಸಕಲಾ ಮಾಯಯಾ ಚ ಪುನಃ ಕೋಶಾವಿಶ್ವಮಾತಾದಿವಿದ್ಯೋಂ ॥ ೧೩ ॥

ಕಏಈಲಹ್ರೀಂ । ಹಸಕಹಲಹ್ರೀಂ । ಸಕಲಹ್ರೀಂ ॥ ೧೪ ॥

ಏಷಾ (ತ್ಮ) ಶಕ್ತಿರೇಷಾ ವಿಶ್ವಮೋಹಿನೀ ಪಾಶಾಂಕುಶಧನುರ್ಬಾಣಧರಾ, ಏಷಾ ಶ್ರೀ ಮಹಾವಿದ್ಯಾ, ಯ ಏವಂ ವೇದ ಸ ಶೋಕಂ ತರತಿ, ನಮಸ್ತೇ ಅಸ್ತು ಭಗವತೀ ಭವತೀ ಮಾತರಸ್ಮಾನ್ಪಾತು ಸರ್ವತಃ ॥ ೧೫ ॥

ಸೈಷಾಷ್ಟೌ ವಸವಸ್ಸೈಷೈಕಾದಶ ರುದ್ರಾಸ್ಸೈಷಾ ದ್ವಾದಶಾದಿತ್ಯಾಸ್ಸೈಷಾ ವಿಶ್ವೇ ದೇವಾಸ್ಸೋಮಪಾ ಅಸೋಮಪಾಶ್ಚ, ಸೈಷಾ ಯಾತುಧಾನಾ ಅಸುರಾ ರಕ್ಷಾಗ್ಂಸಿ ಪಿಶಾಚಾ ಯಕ್ಷಾಃ ಸಿದ್ಧಾಸ್ಸೈಷಾ ಸತ್ತ್ವರಜಸ್ತಮಾಗ್ಂಸಿ, ಸೈಷಾ ಪ್ರಜಾಪತೀಂದ್ರಮನವಃ, ಸೈಷಾ ಗ್ರಹನಕ್ಷತ್ರ ಜ್ಯೋತೀಗ್ಂಷಿ ಕಲಾಕಾಷ್ಠಾದಿಕಾಲರೂಪಿಣೀ,॥

ತಾಮಹಂ ಪ್ರಣೌಮಿ ನಿತ್ಯಂ, ತಾ (ಪಾ) ಪಹಾರಿಣೀಂ ದೇವೀಂ ಭುಕ್ತಿಮುಕ್ತಿ ಪ್ರದಾಯಿನೀಂ ॥ ೧೬ ॥

ಅನಂತಾಂ ವಿಜಯಾಂ ಶುದ್ಧಾಂ ಶರಣ್ಯಾಂ ಶಿವದಾಂ ಶಿವಾಂ ॥

ವಿಯದಾಕಾರಸಂಯುಕ್ತಂ ವೀತಿಹೋತ್ರಸಮನ್ವಿತಂ ।
ಅರ್ಧೇಂದುಲಸಿತಂ ದೇವ್ಯಾ ಬೀಜಂ ಸರ್ವಾರ್ಥಸಾಧಕಂ । ಏವ ಮೇಕಾಕ್ಷರಂ ಮಂತ್ರಂ ಯತಯಶ್ಶುದ್ಧಚೇತಸಃ । ಧ್ಯಾಯನ್ತಿ ಪರಮಾನಂದಮಯಾಜ್ಞಾನಾಂಬುರಾಶಯಃ ॥ ೧೮ ॥

ವಾಙ್ಮಯಾ ಬ್ರಹ್ಮಭೂಸ್ತಸ್ಮಾತ್ ಷಷ್ಠಂ ವಕ್ತ್ರಸಮನ್ವಿತಂ ।
ಸೂರ್ಯೋ ವಾಮಶ್ರೋತ್ರಬಿಂದುಸ್ಸಂಯುತ್ಯಷ್ಟತೃತೀಯಕಂ ।
ನಾರಾಯಣೇನ ಸಂಯುಕ್ತೋ ವಾಯುಶ್ಚಾಧರಸಂಯುತಃ ।
ವಿಚ್ಚೇನವಾರ್ಣಕೋಽರ್ಣಸ್ಸ್ಯಾನ್ಮಹದಾನಂದದಾಯಕಃ ॥ ೨೦ ॥

ಹೃತ್ಪುಂಡರೀಕಮಧ್ಯಸ್ಥಾಂ ಪ್ರಾತಸ್ಸೂರ್ಯಸಮಪ್ರಭಾಂ ।
ಪಾಶಾಂಕುಶಧರಾಂ ಸೌಮ್ಯಾಂ ವರದಾಭಯಹಸ್ತಕಾಂ । ತ್ರಿನೇತ್ರಾಂ
ರಕ್ತವಸನಾಂ ಭಕ್ತಕಾಮದುಘಾಂ ಭಜೇ ॥ ೨೧ ॥

ನಮಾಮಿ ತ್ವಾಮಹಂ ದೇವಿ ಮಹಾಭಯವಿನಾಶಿನೀಂ। ಮಹಾ-
ದುರ್ಗಪ್ರಶಮನೀಂ ಮಹಾಕಾರುಣ್ಯರೂಪಿಣೀಂ ॥ ೨೨ ॥

ಯಸ್ಯಾಃ ಸ್ವರೂಪಂ ಬ್ರಹ್ಮಾದಯೋ ನ ಜಾನನ್ತಿ ತಸ್ಮಾದುಚ್ಯತೇಽಜ್ಞೇಯಾ, ಯಸ್ಯಾ ಅಂತೋ ನ ವಿದ್ಯತೇ ತಸ್ಮಾದುಚ್ಯತೇಽನನ್ತಾ, ಯಸ್ಯಾ ಗ್ರಹಣಂ ನೋಪಲಭ್ಯತೇ ತಸ್ಮಾದುಚ್ಯತೇ ಲಕ್ಷ್ಯಾ, ಯಸ್ಯಾ ಜನನಂ ನೋಪಲಭ್ಯತೇ ತಸ್ಮಾದುಚ್ಯತ ಅಜಾ,

ಏಕೈವ ಸರ್ವತ್ರ ವರ್ತತೇ ತಸ್ಮಾದುಚ್ಯತ ಏಕಾ, ಏಕೈವ ವಿಶ್ವರೂಪಿಣೀ ತಸ್ಮಾದುಚ್ಯತೇಽನೈಕಾ, ಅತ ಏವೋಚ್ಯತೇಽಜ್ಞೇಯಾಽನನ್ತಾ ಲಕ್ಷ್ಯಾಜೈಕಾನೈಕೇತಿ ॥ ೨೪ ॥

ಮಂತ್ರಾಣಾಂ ಮಾತೃಕಾ ದೇವೀ ಶಬ್ದಾನಾಂ ಜ್ಞಾನರೂಪಿಣೀ।
ಜ್ಞಾನಾನಾಂ ಚಿನ್ಮಯಾತೀತಾ ಶೂನ್ಯಾನಾಂ ಶೂನ್ಯಸಾಕ್ಷಿಣೀ ॥ ೨೫ ॥

ಯಸ್ಯಾಃ ಪರತರಂ ನಾಸ್ತಿ ಸೈಷಾ ದುರ್ಗಾ ಪ್ರಕೀರ್ತಿತಾ ।
ದುರ್ಗಾತ್ಸಂತ್ರಾಯತೇ ಯಸ್ಮಾದ್ದೇವೀ ದುರ್ಗೇತಿ ಕಥ್ಯತೇ ॥ ೨೬ ॥

ಪ್ರಪದ್ಯೇ ಶರಣಂ ದೇವೀಂ ದುಂ ದುರ್ಗೇ ದುರಿತಂ ಹರ ।
ತಾಂ ದುರ್ಗಾಂ ದುರ್ಗಮಾಂ ದೇವೀಂ ದುರಾಚಾರವಿಘಾತಿನೀಂ ॥
ನಮಾಮಿ ಭವಭೀತೋಽಹಂ ಸಂಸಾರಾರ್ಣವತಾರಿಣೀಂ ॥ ೨೭ ॥

ಇದಮಥರ್ವಶೀರ್ಷಂ ಯೋಽಧೀತೇ ಸ ಪಂಚಾಥರ್ವಣಶೀರ್ಷ ಜಪಫಲಮವಾಪ್ನೋತಿ, ಇದಮಥರ್ವಶೀರ್ಷಂ ಜ್ಞಾತ್ವಾ-ಯೋಽರ್ಚಾಂ ಸ್ಥಾಪಯತಿ, ಶತಲಕ್ಷಂ ಪ್ರಜಪ್ತ್ವಾಪಿ ಸೋಽರ್ಚಾ-ಸಿದ್ಧಿಂ ವಿಂದತಿ ॥ ೨೮ ॥

ಶತಮಷ್ಟೋತ್ತರಂ ಚಾಸ್ಯಾಃ ಪುರಶ್ಚರ್ಯಾವಿಧಿಸ್ಸ್ಮೃತಃ । ದಶವಾರಂ ಪಠೇದ್ಯಸ್ತು ಸದ್ಯಃ ಪಾಪೈಃ ಪ್ರಮುಚ್ಯತೇ । ಮಹಾ-ದುರ್ಗಾಣಿ ತರತಿ ಮಹಾದೇವ್ಯಾಃ ಪ್ರಸಾದತಃ ॥ ೨೯ ॥

ಪ್ರಾತರಧೀಯಾನೋ ರಾತ್ರಿಕೃತಂ ಪಾಪಂ ನಾಶಯತಿ । ಸಾಯಮಧೀಯಾನೋ ದಿವಸಕೃತಂ ಪಾಪಂ ನಾಶಯತಿ । ತತ್ಸಾಯಂ ಪ್ರಾತಃ ಪ್ರಯುಂಜಾನಃ ಪಾಪೋಽಪಾಪೋ ಭವತಿ । ನಿಶೀಥೇ ತುರೀಯಸಂಧ್ಯಾಯಾಂ ಜಪ್ತ್ವಾ ವಾಕ್ಸಿದ್ಧಿರ್ಭವತಿ ॥ ೩೦ ॥

ನೂತನಪ್ರತಿಮಾಯಾಂ ಜಪ್ತ್ವಾ ದೇವತಾಸಾನ್ನಿಧ್ಯಂ ಭವತಿ । ಪ್ರಾಣಪ್ರತಿಷ್ಠಾಯಾಂ ಜಪ್ತ್ವಾ ಪ್ರಾಣಾನಾಂ ಪ್ರತಿಷ್ಠಾ ಭವತಿ । ಭೌಮಾಶ್ವಿನ್ಯಾಂ ಮಹಾದೇವೀ ಸನ್ನಿಧೌ ಜಪ್ತ್ವಾ ಮಹಾಮೃತ್ಯುಂ ತರತಿ ಯ ಏವಂ ವೇದೇತ್ಯುಪನಿಷತ್ ॥ ೩೧ ॥

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ। ಸ್ಥಿರೈರಂಗೈಸ್ತುಷ್ಟುವಾಗ್ಂ ಸಸ್ತನೂಭಿಃ। ವ್ಯಶೇಮ ದೇವಹಿತಂ ಯದಾಯುಃ। ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ। ಸ್ವಸ್ತಿನಃ ಪೂಷಾ ವಿಶ್ವವೇದಾಃ । ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ । ಸ್ವಸ್ತಿ ನೋ ಬೃಹಸ್ಪತಿ ರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಇತಿ ದೇವ್ಯುಪನಿಷತ್ಸಮಾಪ್ತಾ ॥

# ಪರಿಶಿಷ್ಟ ೨. ವಾಕ್ಯಗಳ ಅರ್ಥವಿವರಣೆ

| ಪುಟ ಪಜ್ತಿ | |
|---|---|
| ೫- ೭ | ಮೇಲೆ ಹೇಳಿದ ಗುರುಪಾದುಕಾಮಂತ್ರಗಳನ್ನು ಉಚ್ಚರಿಸಿ ಮೃಗೀಮುದ್ರೆಯನ್ನು ಪ್ರದರ್ಶಿಸಬೇಕು. ಅನಂತರ ಸುಮುಖ ಸುವೃತ್ತ. ಚತುರಶ್ರ, ಮುದ್ಗರ, ಯೋನಿ ಎಂಬ ಐದು ಮುದ್ರೆಗಳನ್ನು ಪ್ರದರ್ಶಿಸಿ, ಎಡಭುಜವು ಭೂಮಿಗೆ ಸ್ಪರ್ಶಮಾಡುವಂತೆ ಗುರುಗಳನ್ನೂ, ಬಲಭುಜವು ಸ್ಪರ್ಶಮಾಡುವಂತೆ ಮಹಾಗಣಪತಿಯನ್ನೂ "ಗಂ ಗಣಪತಯೇ ನಮಃ" ಎಂಬ ಎಂಬ ಗಣಪತಿ ಮೂಲಮಂತ್ರದಿಂದ ನಮಸ್ಕಾರಮಾಡಬೇಕು |
| ೫-೨೩ | ಮೂಲಮಂತ್ರವಾದ ಷೋಡಶಾಕ್ಷರೀ ಮಂತ್ರವನ್ನು ಉಚ್ಚರಿಸಿ ಪ್ರಾಣಾಯಾಮಪೂರ್ವಕವಾಗಿ ಸಂಕಲ್ಪಮಾಡಿ ದೇಶಕಾಲಾದಿಗಳನ್ನು ಉಚ್ಚರಿಸಬೇಕು. |
| ೭- ೧ | ಆಸನವನ್ನು ಹಾಸಿ ಅಥವಾ ಸಿದ್ಧಪಡಿಸಿ ಬಲಗೈಯಲ್ಲಿ ನೀರನ್ನು ತೆಗೆದುಕೊಂಡು "ಸೌ" ಎಂಬ ಬೀಜಾಕ್ಷರವನ್ನು ಹನ್ನೆರಡಾವರ್ತಿ ಉಚ್ಚರಿಸುತ್ತಾ ಜಲವನ್ನು ಅಭಿಮಂತ್ರಿಸಿ ಆ ಜಲದಿಂದ ಮೂಲಮಂತ್ರಪುರಸ್ಸರವಾಗಿ ಆಸನವನ್ನು ಪ್ರೋಕ್ಷಣೆ ಮಾಡಬೇಕು. |
| ೭-೧೩ | ಈ ಮಂತ್ರಗಳಿಂದ ಆಸನವನ್ನು ಪುಷ್ಪಾಕ್ಷತಾದಿಗಳಿಂದ ಪೂಜಿಸಿ ಬಳಿಕ ಆಸನದಲ್ಲಿ ಕುಳಿತುಕೊಳ್ಳಬೇಕು |
| ೮- ೨ | ಈ ಮಂತ್ರದಿಂದ ಸರ್ವಾವಯವಗಳನ್ನು ಸ್ಪರ್ಶಮಾಡುತ್ತಾ ಮೂರಾವರ್ತಿ ವ್ಯಾಪಕವನ್ನು ಮಾಡಬೇಕು. |
| ೯-೧೬ | ಈ ಅಸ್ತ್ರಮಂತ್ರವನ್ನು ಪಠಿಸುತ್ತಾ ಅಂಗುಷ್ಠದಿಂದ ಹಿಡಿದು ಕಿರುಬೆರಳುಗಳು, ಅಂಗೈ ಮತ್ತು ಬೆರಳುಸಂಧಿಗಳು, ದೇಹ ಇವುಗಳಲ್ಲಿ ಮತ್ತೊಂದಾವರ್ತಿ ವ್ಯಾಪಕವನ್ನು ಮಾಡಬೇಕು. |
| ೧೦-೧೬ | ಈ ಳಳ ಮಂತ್ರಗಳನ್ನು ಉಚ್ಚರಿಸುತ್ತಾ ಮಂದಿರದ ಆಯಾ ಭಾಗಗಳನ್ನು ಮನಸ್ಸಿನಲ್ಲಿ ಭಾವಿಸುತ್ತಾ ಪುಷ್ಪಾಕ್ಷತೆಗಳಿಂದ ಪೂಜಿಸಬೇಕು. |

ಪುಟ ಪಙ್ಕ್ತಿ

೧೪- ೫ ಉಚ್ಛ್ವಾಸವಾಯುವನ್ನು ಪಿಂಗಲನಾಡಿಯಿಂದ (ಬಲನಾಸಾ ಪುಟದಿಂದ) ಒಳಕ್ಕೆ ಎಳೆದುಕೊಂಡು ಪಾದದಿಂದ ಹಿಡಿದು ಮೊಳಕಾಲಿನ ವರೆಗೆ ಇರುವ ದೇಹಭಾಗವನ್ನು ಪೃಥಿವೀಸ್ಥಾನ ವೆಂದೂ (ಅಥವಾ ಪೃಥಿವೀತತ್ತ್ವಾತ್ಮಕವೆಂದೂ, ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮೂಲೆಗಳುಳ್ಳ ಚಚ್ಚೌಕವಾದ ಮಂಡಲದ ಮಧ್ಯದಲ್ಲಿ ಹಳದಿಯ ವರ್ಣದಿಂದ ಕೂಡಿ ಲಂ ಎಂಬ ಬೀಜಾಕ್ಷರಸಹಿತವಾಗಿರುವಂತೆ ಭಾವಿಸಬೇಕು.

೧೪- ೮ ಈ ಮಂತ್ರದಿಂದ ಮೂಲಾಧಾರವೆಂಬ ಚಕ್ರದಲ್ಲಿರುವ ಜೀವಾತ್ಮನನ್ನು ಸುಷುಮ್ನಾನಾಡಿಯ ಮೂಲಕ ಬ್ರಹ್ಮರಂಧ್ರದ ವರೆಗೆ ತಂದು ಆ ಜೀವಾತ್ಮನು ಪರಮಶಿವನಲ್ಲಿ ಐಕ್ಯವಾಗಿರು ವಂತೆ ಭಾವಿಸಿ ಇಡಾನಾಡಿಯಿಂದ (ಅಥವಾ ಎಡನಾಸಾ ಪುಟದಿಂದ) ನಿಶ್ವಾಸವಾಯುವನ್ನು ಬಿಡಬೇಕು.

೧೪-೧೩ ಮೊಳಕಾಲಿನಿಂದ ಹಿಡಿದು ನಾಭಿಯ ವರೆಗೆ ಇರುವ ದೇಹ ಭಾಗವನ್ನು ಜಲತತ್ತ್ವಾತ್ಮಕವೆಂದೂ, ಧನುರಾಕಾರವಾಗಿರು ವುದೆಂದೂ, ಎರಡು ಕಟಿಗಳ ಮಧ್ಯೇ ಬಿಳಿಯ ಕಮಲವಿರು ವುದೆಂದೂ, ಅದು ವಂ ಎಂಬ ಬೀಜಾಕ್ಷರದಿಂದ ಸಹಿತವಾಗಿರು ವುದೆಂದೂ ಧ್ಯಾನಿಸಿ ಈ ಮಂತ್ರವನ್ನು ಉಚ್ಚರಿಸಿ ತನ್ನ ಶರೀರವು ಶೋಷಿತವಾಯಿತೆಂದು ಭಾವಿಸಿ ಪಿಂಗಲಸ್ಥಾನದಿಂದ (ಬಲಭಾಗದಿಂದ) ಶ್ವಾಸವನ್ನು ಬಿಡಬೇಕು.

೧೪-೧೭ ನಾಭಿಯಿಂದ ಹಿಡಿದು ಹೃದಯದ ವರೆಗೆ ಇವರು ದೇಹ ಭಾಗವನ್ನು ಅಗ್ನಿತತ್ತ್ವಾತ್ಮಕವೆಂದೂ, ತ್ರಿಕೋಣಾಕಾರವಾಗಿ ಸ್ವಸ್ತಿಕಚಿಹ್ನೆಯಿಂದ ಕೂಡಿ ಮಧ್ಯದಲ್ಲಿ ಕೆಂಪುಬಣ್ಣ ಮತ್ತು ರಂ ಎಂಬ ಬೀಜಾಕ್ಷರ ಸಹಿತವಾಗಿರುವುದೆಂದೂ ಧ್ಯಾನಿಸಿ ಈ ಮಂತ್ರದಿಂದ ಸಂಕೋಚಶರೀರವನ್ನು ಸುಟ್ಟು ಭಸ್ಮವಾ ದಂತೆ ಭಾವಿಸಿ ಬಲಭಾಗದ ನಾಸಾಪುಟದಿಂದ ನಿಶ್ವಾಸವಾಯು ವನ್ನು ಹೊರಕ್ಕೆ ಬಿಡಬೇಕು.

ಪುಟ ಪಜ್ತಿ

೧೫- ೩ ಹೃದಯದಿಂದ ಹಿಡಿದು ಹುಬ್ಬುಗಳ ನಡುವಿನ ವರಿವಿಗೂ ಇರುವ ದೇಹಭಾಗವು ವಾಯುತತ್ತ್ವಾತ್ಮಕವೆಂದೂ, ಷಟ್ಕೋಣಾಕಾರವಾಗಿ ಷಡ್ಬಿಂದುಗಳಿಂದ ಸಹಿತವಾಗಿಯೂ, ಮಧ್ಯದಲ್ಲಿ ಧೂಮ್ರವರ್ಣ ಮತ್ತು ಯಂ ಎಂಬ ಬೀಜಾಕ್ಷರಸಹಿತವಾಗಿರುವುದೆಂದೂ ಧ್ಯಾನಿಸಿ ಈ ಮಂತ್ರದಿಂದ, ಹಿಂದೆ ಹೇಳಿದಂತೆ ಶರೀರವು ದಹಿಸಿ ಉಂಟಾದ ಭಸ್ಮವನ್ನು ಶಿರಸ್ಸಿನಲ್ಲಿರುವ (ಮೆದುಳಿನಲ್ಲಿರುವ) ಸಹಸ್ರಾರವೆಂಬ ಸಾವಿರದಳಗಳುಳ್ಳ ಕಮಲವಿರುವ ಇಂದುಮಂಡಲದಿಂದ ಜಿನುಗುತ್ತಿರುವ ಅಮೃತ ಧಾರೆಯಿಂದ ನೆನೆಯುತ್ತಿರುವಂತೆ ಭಾವಿಸಿ ನಿಶ್ವಾಸವಾಯುವನ್ನು ಎಡನಾಸಾಪುಟದಿಂದ ಬಿಡಬೇಕು

೧೫- ೮ ಭ್ರೂಮಧ್ಯ (ಹುಬ್ಬುಗಳ ನಡುವೆ) ಯಿಂದ ಹಿಡಿದು ನೆತ್ತಿಯಲ್ಲಿರುವ ಬ್ರಹ್ಮರಂಧ್ರದವರೆಗಿನ ಶರೀರಭಾಗವನ್ನು ದುಂಡಾಗಿರುವಂತೆಯೂ ಧ್ವಜಚಿಹ್ನೆಯಿಂದ ಸಹಿತವಾಗಿ ನೀಲವರ್ಣಯುಕ್ತವಾಗಿಯೂ ಹಂ ಎಂಬ ಬೀಜಾಕ್ಷರಸಹಿತವಾಗಿಯೂ ಇರುವಂತೆ ಧ್ಯಾನಿಸಿ ಶರೀರವು ದಹಿಸಿ ಉಂಟಾದ ಭಸ್ಮವು ಸಹಸ್ರಾರಪದ್ಮದಿಂದ ಜಿನುಗುತ್ತಿರುವ ಅಮೃತರಸದಿಂದ ನೆನೆಯುತ್ತಿರುವುದೆಂದು ಹಿಂದೆ ಹೇಳಿರುವುದಷ್ಟೆ. ಆ ರೀತಿ ನೆನೆದ ಭಸ್ಮದಿಂದ ದಿವ್ಯಶರೀರವು (ಪಂಚಭೂತಾತ್ಮಕವಲ್ಲದ ಉತ್ಪನ್ನವಾದಂತೆ ಭಾವಿಸಿ ಬಲಭಾಗದ ನಾಸಾಪುಟದಿಂದ ನಿಶ್ವಾಸವಾಯುವನ್ನು ಬಿಡಬೇಕು. ಬಳಿಕ ಲಂ ಎಂಬ ಬೀಜಾಕ್ಷರವನ್ನು ಆರಾವರ್ತಿ ಉಚ್ಚರಿಸಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ಗುಣಗಳುಳ್ಳ ಪೃಥ್ವೀತತ್ತ್ವವನ್ನು (ಎಂದರೆ ಶರೀರದಲ್ಲಿರುವ ಪೃಥಿವೀ (ಗಟ್ಟಿಯಾದ, ಘನವಾದ), ಭಾಗವನ್ನು ಜಲತತ್ತ್ವದಲ್ಲಿ ಲೀನವಾದಂತೆ (ಬೆರತು ಒಂದಾಗಿ ಹೋದಂತೆ) ಭಾವಿಸಬೇಕು. ಬಳಿಕ ವಂ ಎಂಬ ಬೀಜಾಕ್ಷರವನ್ನು ಐದಾವರ್ತಿ ಉಚ್ಚರಿಸಿ ಶಬ್ದ, ಸ್ಪರ್ಶ, ರೂಪ, ರಸ ಎಂಬ

ಪುಟ ಪಙ್ಕ್ತಿ

ಎಂಬ ನಾಲ್ಕು ಗುಣಗಳುಳ್ಳ ಜಲತತ್ತ್ವವನ್ನು ಅಗ್ನಿ ತತ್ತ್ವದಲ್ಲಿಯೂ, ರಂ ಎಂಬ ಬೀಜಾಕ್ಷರದ ನಾಲ್ಕಾವರ್ತಿ ಉಚ್ಚಾರಣೆಯಿಂದ ಶಬ್ದ, ಸ್ಪರ್ಶ, ರೂಪ ಎಂಬ ಮೂರು ಗುಣಗಳುಳ್ಳ ಅಗ್ನಿತತ್ತ್ವವನ್ನು ವಾಯುತತ್ತ್ವದಲ್ಲಿಯೂ ಯಂ ಎಂಬ ಬೀಜಾಕ್ಷರೋಚ್ಚಾರಣೆಯನ್ನು ಮೂರಾವರ್ತಿಮಾಡಿ ಶಬ್ದ, ಸ್ಪರ್ಶ ಎಂಬ ಎರಡು ಗುಣಗಳುಳ್ಳ ಆಕಾಶತತ್ತ್ವದಲ್ಲಿಯೂ, ಹಂ ಎಂಬ ಬೀಜಾಕ್ಷರವನ್ನು ಎರಡಾವರ್ತಿ ಉಚ್ಚಾರವಮಾಡಿ ಶಬ್ದ ಎಂಬ ಒಂದೇ ಗುಣವುಳ್ಳ ಆಕಾಶತತ್ತ್ವವನ್ನು ಅಹಂಕಾರತತ್ತ್ವದಲ್ಲಿಯೂ ಅಹಂಕಾರತತ್ತ್ವವನ್ನು ಮಹತತ್ತ್ವದಲ್ಲಿಯೂ, ಮಹತತ್ತ್ವವನ್ನು ಪ್ರಕೃತಿಯಲ್ಲಿಯೂ ಪ್ರಕೃತಿಯನ್ನು ಪರಬ್ರಹ್ಮದಲ್ಲಿಯೂ ಸೇರಿಹೋದಂತೆ ಭಾವಿಸಬೇಕು. ಈ ರೀತಿ ಭಾವಿಸುವುದರಿಂದ ನಾನು (ಸಾಧಕನು) ಶುದ್ಧಸ್ವರೂಪನೂ, ಸಂಸಾರಾದಿಬಂಧಗಳಿಲ್ಲದ ಮುಕ್ತನೂ ಸಚ್ಚಿದಾನಂದಸ್ವರೂಪನೂ ಆದ ಬ್ರಹ್ಮನೇ (ಬ್ರಹ್ಮಸ್ವರೂಪನೇ) ಆಗಿರುವೆನೆಂದು ಭಾವಿಸಬೇಕು.

೧೫-೧೦ ಈ ರೀತಿ ದಿವ್ಯದೇಹೋತ್ಪತ್ತಿವಿಧಾನವನ್ನು ಧ್ಯಾನಿಸಿ ಮತ್ತೆ ಹಂಸಃ ಎಂಬ ಮಂತ್ರೋಚ್ಚಾರಣೆಯಿಂದ ಅಂಕುಶಮುದ್ರೆಯನ್ನು ಪ್ರದರ್ಶಿಸಿ ಜೀವಾತ್ಮನನ್ನು ಬ್ರಹ್ಮರಂಧ್ರದಿಂದ ಸುಷುಮ್ನಾ ಎಂಬ ನಾಡೀಮಾರ್ಗವಾಗಿ ಹೃದಯಸ್ಥಾನಕ್ಕೆ ತಂದು ಅಲ್ಲಿ ಪ್ರತಿಷ್ಠಿಸಿ ಹಂಸಃ ಸೋಽಹಂ ಎಂಬ ಮಂತ್ರವನ್ನು ಉಚ್ಚರಿಸಬೇಕು.

೧೫-೧೮ ಈ ಮಂತ್ರೋಚ್ಚಾರಣೆಯಿಂದ ಪರಮಶಿವನಲ್ಲಿ ಒಂದಾಗಿ ಸೇರಿಹೋದ ಜೀವಾತ್ಮನನ್ನು ಮತ್ತೆ ಸುಷುಮ್ನಾ ಎಂಬ ನಾಡೀಮಾರ್ಗದಿಂದ ತಂದು ಮೂಲಾಧಾರವೆಂಬ ಚಕ್ರಮಧ್ಯದಲ್ಲಿ ಸ್ಥಾಪಿಸಿದಂತೆ ಧ್ಯಾನಿಸಬೇಕು.

ಪುಟ ಪಙ್ಕ್ತಿ

೧೬-೧೩ ಈ ಮಂತ್ರವನ್ನು ಉಚ್ಚರಿಸಿ ಎಡಬಲಭಾಗಗಳಲ್ಲಿ ಭೂಮಿಯನ್ನು ಮೂರಾವರ್ತಿ ಹೊಡೆದು, ಮೂರಾವರ್ತಿ ಚಪ್ಪಾಳೆ ಹೊಡೆದು, ಮೂರಾವರ್ತಿ ಕ್ರೂರದೃಷ್ಟಿಯಿಂದ ಎಲ್ಲವನ್ನೂ ನೋಡಿ, ಭೂಮ್ಯಂತರಿಕ್ಷಸ್ವರ್ಗಗಳಲ್ಲಿರುವ ಸಮಸ್ತ ಪೂಜಾ ವಿಘ್ನಗಳನ್ನು ನಾಶವಮಾಡಬೇಕು.

೧೬-೧೭ ನಮಃ ಎಂಬ ಅಂಗುಷ್ಠಮಂತ್ರವನ್ನು ಉಚ್ಚರಿಸಿ ಅಂಕುಶ ಮುದ್ರೆಯನ್ನು ಪ್ರದರ್ಶಿಸಿ ಜುಟ್ಟನ್ನು ಗಂಟುಹಾಕಿಕೊಳ್ಳಬೇಕು.

೧೭- ೫ ತನ್ನ (ಸಾಧಕನ) ಮುಂದುಗಡೆ ಸ್ವಲ್ಪ ಎಡಭಾಗವಲ್ಲಿ ತ್ರಿಕೋಣ, ವೃತ್ತ, ಚತುರಶ್ರ ಇವುಗಳಿಂದ ಸಹಿತವಾದ ಮಂಡಲವನ್ನು ಮತ್ಸ್ಯಮುದ್ರೆಯನ್ನು ಪ್ರದರ್ಶಿಸುತ್ತಾ ಬರೆಯಬೇಕು. ಬಳಿಕ ಮೂಲಮಂತ್ರದಿಂದ ಎಂದರೆ ಓಂ ಐಂ ಹ್ರೀಂ ಶ್ರೀಂ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ ಶ್ರೀಂ ಎಂಬ ಷೋಡಶಾಕ್ಷರೀ ಮಂತ್ರೋಚ್ಚಾರಣೆಯಿಂದ ಮಂಡಲವನ್ನು ಪೂಜಿಸಿ, ಕರ್ಪೂರಾದಿ ಸುಗಂಧದ್ರವ್ಯಗಳಿಂದ ಸುವಾಸಿತವಾದ ಜಲವನ್ನು ಕಲಶಕ್ಕೆ ತುಂಬಿ ಆ ಕಲಶವನ್ನು ಗಂಧ ಪುಷ್ಪಾಕ್ಷತೆಗಳಿಂದ ಅಲಂಕಾರವಮಾಡಿ ಮಂಡಲದ ಮೇಲಿರಿಸಬೇಕು

೧೮-೧೦ ಬಳಿಕ ಮೂಲಮಂತ್ರದಿಂದ ಎಂಟಾವರ್ತಿ ಕಲಶವನ್ನು ಅಭಿಮಂತ್ರಿಸಿ, ಧೇನುಮುದ್ರೆಯನ್ನು ಪ್ರದರ್ಶಿಸಿ ಕಲಶೋದಕದಿಂದ ಪೂಜಾಸಾಮಗ್ರಿಗಳನ್ನೂ ತನ್ನನ್ನೂ ಪ್ರೋಕ್ಷಣೆಮಾಡಬೇಕು.

೧೯- ೨ ವರ್ಧನೀಕಲಶಪಾತ್ರೆಯ ದಕ್ಷಿಣಭಾಗದಲ್ಲಿ ಕಲಶೋದಕದಿಂದ, ಮಧ್ಯದಲ್ಲಿ ಬಿಂದು, ಅದರ ಸುತ್ತ ತ್ರಿಕೋಣ, ಅದರ ಸುತ್ತ ಷಟ್ಕೋಣ, ಅದರ ಸುತ್ತ ವೃತ್ತ, ಅದರ ಸುತ್ತ ಚಚ್ಚೌಕ ಈ ರೀತಿಯಾಗಿ ಮಂಡಲವನ್ನು (ಮತ್ಸ್ಯಮುದ್ರಾಪ್ರದರ್ಶನ

ಪುಟ ಪಙ್ಕ್ತಿ

ಪೂರ್ವಕವಾಗಿ) ರಚಿಸಬೇಕು. ಅಲ್ಲಿಯೇ ಕೊಟ್ಟಿರುವ ಮಂಡಲದ ಚತುರಶ್ರದಲ್ಲಿ (ಚೌಕ) (೧) ಆಗ್ನೇಯ (೨) ಈಶಾನ್ಯ (೩) ನೈರ್ಋತ್ಯ (೪) ವಾಯುವ್ಯ ದಿಕ್ಕುಗಳಲ್ಲಿಯೂ (೫) ಮಧ್ಯದಲ್ಲಿರುವ ಬಿಂದುವಿನಲ್ಲಿಯೂ, (೬) ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ಈ ಮಂತ್ರಗಳಿಂದ ಪೂಜಿಸಬೇಕು. ಹೇಗೆಂದರೆ—

(೧) ಓಂ ಐಂ ಹ್ರೀಂ ಶ್ರೀಂ ಐಂ ಹೃದಯಾಯ ನಮಃ ಹೃದಯಶಕ್ತಿ ಶ್ರೀಪಾದುಕಾಂ ಪೂಜಯಾಮಿ—ಎಂಬ ಮಂತ್ರದಿಂದ (೧) ಎಂದು ಗುರುತುಮಾಡಿರುವ ಮಂಡಲದ ಆಗ್ನೇಯ ದಿಕ್ಕಿನ ಮೂಲೆಯಲ್ಲಿ ಪೂಜಿಸಬೇಕು. ಅದರಂತೆಯೇ—

(೨) ಈಶಾನ್ಯದಿಕ್ಕಿನಲ್ಲಿ ಓಂ . . . ನಮಃ ಎಂದು ಶಿರಶ್ಶಕ್ತಿಯನ್ನೂ

(೩) ನೈರ್ಋತ್ಯದಿಕ್ಕಿನಲ್ಲಿ ಶಿಖಾಶಕ್ತಿಯನ್ನೂ

(೪) ವಾಯವ್ಯದಿಕ್ಕಿನಲ್ಲಿ ಕವಚಶಕ್ತಿಯನ್ನೂ

(೫) ಮಧ್ಯದಲ್ಲಿರುವ ಬಿಂದುವಿನಲ್ಲಿ ನೇತ್ರಶಕ್ತಿಯನ್ನೂ

(೬) ಈ ಗುರುತುಮಾಡಿರುವ ಪೂರ್ವ, ಪಶ್ಚಿಮ, ದಕ್ಷಿಣ. ಉತ್ತರ ಎಂಬ ನಾಲ್ಕು ದಿಕ್ಕುಗಳಲ್ಲಿ ಅಸ್ತ್ರಶಕ್ತಿಯನ್ನೂ ಕ್ರಮವಾಗಿ ಪೂಜಿಸಬೇಕು. ಅನುಕೂಲಕ್ಕಾಗಿ ದಿಕ್ಕುಗಳಿಗೂ, ಆಯಾ ಮಂತ್ರಗಳಿಗೂ ಸಂಖ್ಯೆಯನ್ನು ಕೊಟ್ಟಿರುತ್ತೆ.

೨೦- ೬ ಇದಾದ ಬಳಿಕ ಷಟ್ಕೋಣದಲ್ಲಿ ಸಾಧಕನು ತನ್ನ ಮುಂದುಗಡೆಯಿರುವ (೧) ಎಂದು ಗುರುತುಮಾಡಿರುವ ಪೂರ್ವದಿಕ್ಕಿನಿಂದ ಪ್ರಾರಂಭಿಸಿ ಪ್ರದಕ್ಷಿಣಾಕಾರವಾಗಿ (೧) (೨) (೩) (೪) (೫) (೬) ಎಂಬ ಆರುಕೋಣಗಳಲ್ಲಿ (೧) (೨) (೩) (೪) (೫) (೬) ಎಂಬ ಆರು ಮಂತ್ರಗಳಿಂದ ಪೂಜೆಮಾಡಬೇಕು.

ಪುಟ ಪಙ್ತಿ

೨೧- ೧ ಅನಂತರ ತ್ರಿಕೋಣದಲ್ಲಿ ಹಿಂದೆ ಹೇಳಿದ ಪ್ರದಕ್ಷಿಣಾಕಾರದಂತೆ (೧) (೨) (೩) ಎಂಬ ಸ್ಥಳಗಳಲ್ಲಿ (೧) (೨) (೩) ಎಂಬ ಮಂತ್ರಗಳಿಂದಲೂ, (೫) ಎಂಬ ಬಿಂದುವಿನಲ್ಲಿ (೫) ಎಂಬ ಮಂತ್ರದಿಂದಲೂ ಪೂಜೆಮಾಡಿ (೭) ಮಂತ್ರದಿಂದ ಸಾಮಾನ್ಯಾರ್ಘ್ಯಪಾತ್ರೆಯ ಪೀಠವನ್ನು ತೊಳೆದು (೮) ಮಂತ್ರದಿಂದ ಅರ್ಘ್ಯಪಾತ್ರೆಯನ್ನು ಪೂಜೆಮಾಡಿ ಮಂಡಲದ ಮೇಲಿಡಬೇಕು.

೨೧-೧೬ ಈ ಮಂತ್ರದಿಂದ ಅಗ್ನಿಮಂಡಲವನ್ನು ಧ್ಯಾನಿಸಿ ಹತ್ತು ಅಗ್ನಿಕಲೆಗಳನ್ನು ಕೆಳಗೆ ಕೊಟ್ಟಿರುವ ಹತ್ತು ಮಂತ್ರಗಳಿಂದ ಪೂಜಿಸಬೇಕು.

೨೨-೧೧ ಅಸ್ತ್ರಾಯ ಫಟ್ ಎಂಬ ಮಂತ್ರದಿಂದ ಶಂಖವನ್ನು ತೆಗೆದುಕೊಂಡು ಸಾಮಾನ್ಯಾರ್ಘ್ಯ ಪಾತ್ರಾಯ ನಮಃ ಎಂದು ಅರ್ಘ್ಯಪಾತ್ರೆಯ ಸಮೀಪದಲ್ಲಿ ಸ್ಥಾಪನೆಮಾಡಬೇಕು.

೨೨-೨೦ ಈ ಮಂತ್ರದಿಂದ ಸೂರ್ಯಮಂಡಲವನ್ನು ಧ್ಯಾನಿಸಿ ಸೂರ್ಯನ ಹನ್ನೆರಡು ಕಲೆಗಳನ್ನು ಕೆಳಗಿನ ಹನ್ನೆರಡು ಮಂತ್ರಗಳಿಂದ ಶಂಖದ ಹನ್ನೆರಡು ಭಾಗಗಳಲ್ಲಿ ಪೂಜಿಸಬೇಕು

೨೩-೧೩ ಓಂ ಐಂ ಹ್ರೀಂ ಶ್ರೀಂ ಮಂ ಸೋಮಮಂಡಲಾಯ ಕಾಮಪ್ರದಷೋಡಶಕಲಾತ್ಮನೇ ಮಹಾತ್ರಿಪುರಸುಂದರ್ಯಾಃ ಸಾಮಾನ್ಯಾರ್ಘ್ಯಾಮೃತಾಯ ನಮಃ ಎಂಬ ಮಂತ್ರದಿಂದ ಕಲಶೋದಕವನ್ನು ಶಂಖಕ್ಕೆ ಹಾಕಿ ಕ್ಷೀರ (ಹಾಲು) ವನ್ನು ಒಂದು ತೊಟ್ಟು ಹಾಕಬೇಕು.

೨೪- ೪ ಈ ಮಂತ್ರದಿಂದ ಸೋಮಮಂಡಲವನ್ನು ಧ್ಯಾನಮಾಡಿ ಚಂದ್ರನ ಹದಿನಾರು ಕಲೆಗಳನ್ನು ಕೆಳಗೆ ಕೊಟ್ಟಿರುವ ಹದಿನಾರು ಮಂತ್ರಗಳಿಂದ ಪೂಜಿಸಬೇಕು.

೨೫- ೩ ಅನಂತರ ಆ ಶಂಖದ ಆಗ್ನೇಯ, ಈಶಾನ್ಯ, ನೈರ್ಋತ್ಯ, ವಾಯುವ್ಯ ಕೋಣಗಳಲ್ಲಿಯೂ ಮಧ್ಯದಲಿಯೂ ಪೂರ್ವಾದಿ

ಪುಟ ಪಙ್ಕ್ತಿ

ನಾಲ್ಕು ದಿಕ್ಕುಗಳಲ್ಲಿಯೂ ಪೂಜಿಸಿ, ಅಸ್ತ್ರಾಯ ಫಟ್ ಎಂದು ರಕ್ಷಣಾಮಂತ್ರವನ್ನು ಉಚ್ಚರಿಸಿ, ಕವಚಾಯ ಹುಂ ಎಂಬ ಮಂತ್ರದಿಂದ ಅವಕುಂಠನ ಮಾಡಿ, ಧೇನುಮುದ್ರಾ ಮತ್ತು ಯೋನಿಮುದ್ರೆಗಳನ್ನು ಪ್ರದರ್ಶಿಸಬೇಕು. ಅನಂತರ ಮೂಲ ಮಂತ್ರದಿಂದ (ಕಏಈಲಹ್ರೀಂ ಇತ್ಯಾದಿ) ಏಳಾವೃತ್ತಿ ಅಭಿ ಮಂತ್ರಿಸಿ ಆ ಶಂಖೋದಕದ ಸ್ವಲ್ಪ ಭಾಗವನ್ನು ತೆಗೆದು ಕೊಂಡು ಪೂಜಾಸಾಮಗ್ರಿಗಳನ್ನೂ, ತನ್ನನ್ನೂ ಪ್ರೋಕ್ಷಣೆ ಮಾಡಬೇಕು. ಮತ್ತು ಶಂಖೋದಕದ ಸ್ವಲ್ಪ ಭಾಗವನ್ನು ವರ್ಧನೀಕಲಶದಲ್ಲಿ ಹಾಕಬೇಕು.

೨೫-೧೨ ಸಾಮಾನ್ಯಾರ್ಘ್ಯಕಲಶೋದಕದಿಂದ ಹಿಂದೆ ಮಾಡಿದಂತೆ ಬಿಂದು, ತ್ರಿಕೋಣ, ಷಟ್ಕೋಣ, ವೃತ್ತ, ಚತುರಶ್ರಗಳಿಂದ ಸಹಿತವಾದ ಮಂಡಲವನ್ನು ಮತ್ಸ್ಯಮುದ್ರೆಪೂರ್ವಕವಾಗಿ ರಚಿಸಿ, ಬಿಂದುವಿನ ಮಧ್ಯದಲ್ಲಿ ಈಂ ಎಂಬ ಬೀಜಾಕ್ಷರವನ್ನು ಬರೆಯಬೇಕು. ಚತುರಶ್ರದಲ್ಲಿ ಹಿಂದಿನಂತೆ ಆರುಮಂತ್ರ ಗಳಿಂದ ಆಗ್ನೇಯ, ಈಶಾನ್ಯ, ನೈಋರ್ತ್ಯ, ವಾಯವ್ಯಾದಿ ನಾಲ್ಕು ವಿದಿಕ್ಕುಗಳಲ್ಲಿಯೂ ಬಿಂದುವಿನಲ್ಲಿಯೂ, ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ ಪೂಜಿಸಬೇಕು. ಬಳಿಕ, ಷಟ್ಕೋಣ ದಲ್ಲಿ ಪ್ರದಕ್ಷಿಣಾಕಾರವಾಗಿ ಹಿಂದಿನ ಆರು ಮಂತ್ರಗಳಿಂದಲೂ ತ್ರಿಕೋಣದಲ್ಲಿ ಮೂಲಮಂತ್ರದ ತ್ರಿಖಂಡಗಳಿಂದಲೂ (ಎಂದರೆ ಕಏಈಲಹ್ರೀಂ ಹಸಕಹಲಹ್ರೀಂ ಸಕಲಹ್ರೀಂ ಶ್ರೀಂ) ಪೂಜಿಸಿ ಬಿಂದುವನ್ನು ಮೂಲಮಂತ್ರದಿಂದ ಪೂಜಿಸಬೇಕು

೨೬- ೧ ಈ ಮಂತ್ರಗಳಿಂದ ಚತುರಶ್ರದಲ್ಲಿ ಆಯಾ ಸ್ಥಳಗಳಲ್ಲಿ ಪೂಜಿಸಬೇಕು.

೨೭- ೧ ಈ ಮಂತ್ರಗಳಿಂದ ಷಟ್ಕೋಣದಲ್ಲಿ ಆಯಾ ಸ್ಥಳಗಳಲ್ಲಿ ಪೂಜಿಸಬೇಕು.

ಪುಟ ಪಙ್ಕ್ತಿ

೨೭-೧೪ ಈ ಮಂತ್ರಗಳಿಂದ ತ್ರಿಕೋಣದಲ್ಲಿ ಆಯಾ ಸ್ಥಳಗಳಲ್ಲಿ ಪೂಜಿಸಬೇಕು. ಎಲ್ಲವೂ ಸಾಮಾನ್ಯಾರ್ಘ್ಯದ ಪೂಜೆಯಂತೆ.

೨೮-೧೦ ಈ ಮಂತ್ರವನ್ನು ಉಚ್ಚರಿಸಿ ಅಗ್ನಿಮಂಡಲವನ್ನು ಧ್ಯಾನಿಸಿ ಕೆಳಗಿನ ಮಂತ್ರಗಳಿಂದ ಹತ್ತು ವಹ್ನಿಕಲೆಗಳನ್ನು ಪೂಜಿಸಬೇಕು.

೨೯- ೧ ಅಸ್ತ್ರಾಯ ಫಟ್ ಎಂಬ ಅಸ್ತ್ರಮಂತ್ರದಿಂದ ವಿಶೇಷಾರ್ಘ್ಯ ಪಾತ್ರೆಯನ್ನು ತೊಳೆಯಬೇಕು.

೨೯- ೬ ವಿಶೇಷಾರ್ಘ್ಯಪಾತ್ರೆಯನ್ನು ಈ ಮಂತ್ರೋಚ್ಚಾರಣೆಯಿಂದ ಮಂಡಲದ ಮೇಲಿಡಬೇಕು.

೨೯-೧೧ ಈ ಮಂತ್ರದಿಂದ ಅರ್ಘ್ಯಪಾತ್ರೆಯನ್ನು ಪುಷ್ಪಗಳಿಂದ ಪೂಜಿಸಬೇಕು.

೨೯-೧೬ ಈ ಮಂತ್ರೋಚ್ಚಾರಣೆಯಿಂದ ಸೂರ್ಯಮಂಡಲವನ್ನು ಭಾವಿಸಿ ಹನ್ನೆರಡು ಸೂರ್ಯಕಲೆಗಳನ್ನು ಕೆಳಗಿನ ಮಂತ್ರಗಳಿಂದ ಪೂಜಿಸಬೇಕು.

೩೧-೧೬ ಈ ಮಂತ್ರದಿಂದ ಚಂದ್ರಮಂಡಲವನ್ನು ಭಾವಿಸಿ ಚಂದ್ರನ ಹದಿನಾರು ಕಲೆಗಳನ್ನು ಪೂಜಿಸಬೇಕು.

೩೨-೧೪ ಈ ಮಂತ್ರದಿಂದ ಎಂಟಾವರ್ತಿ ಅಭಿಮಂತ್ರಿಸಬೇಕು.

೩೨-೧೫ ಅನಂತರ ತ್ರಿಕೋಣದ ಮೂರು ರೇಖೆಗಳಲ್ಲಿ ಒಂದು ರೇಖೆಯಲ್ಲಿ ಅ ಆ ಇ ಈ ಉ ಊ ಋ ೠ ಌ ೡ ಏ ಐ ಓ ಔ ಅಂ ಅಃ ಎಂಬ ಹದಿನಾರು ಅಕ್ಷರಗಳನ್ನೂ ಮತ್ತೊಂದು ರೇಖೆಯಲ್ಲಿ ಕ ಖ ಗ ಘ ಙ ಚ ಛ ಜ ಝ ಞ ಟ ಠ ಡ ಢ ಣ ತ ಎಂಬ ಹದಿನಾರು ಅಕ್ಷರಗಳನ್ನೂ, ಮೂರನೆಯ ರೇಖೆಯಲ್ಲಿ ಥ ದ ಧ ನ ಪ ಫ ಬ ಭ ಮ ಯ ರ ಲ ವ ಶ ಷ ಸ ಎಂಬ ಹದಿನಾರು ಅಕ್ಷರಗಳನ್ನೂ ಬರೆದು ಕೋಣದ ಒಳಭಾಗದ ಮೂರು ಮೂಲೆಗಳಲ್ಲಿ ಹ ಳ ಕ್ಷ ಎಂಬ ಮೂರು ಅಕ್ಷರಗಳನ್ನೂ ಅಪ್ರದಕ್ಷಿಣಾಕಾರವಾಗಿಯೂ, ಮೂರು ಮೂಲೆ

ಪುಟ ಪಙ್ಕ್ತಿ

ಗಳ ಹೊರಭಾಗದಲ್ಲಿ ಮೂಲಮಂತ್ರದ ಖಂಡತ್ರಯಗಳನ್ನು ಪ್ರದಕ್ಷಿಣಾಕಾರವಾಗಿಯೂ ಮಧ್ಯದಲ್ಲಿರುವ ಬಿಂದುವಿನಲ್ಲಿ ಅನುಸ್ವಾರಸಹಿತವಾದ ನಾಲ್ಕನೇ ಸ್ವರವನ್ನು ಎಂದರೆ ಈಂ ಎಂಬ ಬೀಜಾಕ್ಷರವನ್ನೂ ಬಿಂದುವಿನ ಬಲ ಎಡಭಾಗಗಳಲ್ಲಿ ಹಂ ಸಃ ಎಂಬ ಅಕ್ಷರಗಳನ್ನೂ ಕ್ರಮವಾಗಿ ಬರೆಯಬೇಕು.

೩೩- ೧ ಈ ಮಂತ್ರದಿಂದ ತ್ರಿಕೋಣದ ಹೊರಗೆ ಸುತ್ತಲೂ ವೃತ್ತಾಕಾರವನ್ನೂ ಅದರ ಹೊರಗಡೆ ಷಟ್ಕೋಣವನ್ನೂ ಬರೆದು ತನ್ನ ಎದುರಿಗಿರುವ ಕೋಣದಿಂದ ಪ್ರಾರಂಭಿಸಿ ಪ್ರದಕ್ಷಿಣಾಕಾರವಾಗಿ ಹಿಂದೆ ಹೇಳಿದ ಷಡಂಗಮಂತ್ರಗಳಿಂದ ಷಟ್ಕೋಣವನ್ನು ಪೂಜಿಸಬೇಕು.

೩೩- ೮ ಈ ಮಂತ್ರದಿಂದ ಅಮೃತಮಯವಾದ ಕಲಶೋದಕವನ್ನು ಪೂಜಿಸಿ ಆ ಉದಕದ ಸ್ವಲ್ಪಭಾಗವನ್ನು ಬೇರೆ ಪಾತ್ರೆಗೆ ಹಾಕಿ ತೆಗೆದುಕೊಂಡು ಅಲ್ಲಿಯೇ ಇಟ್ಟು ಅವಕುಂಠನಮಾಡಿ ಧೇನುಮುದ್ರೆಯನ್ನು ಪ್ರದರ್ಶಿಸಬೇಕು.

೩೪- ೩ ಬಳಿಕ ಪುಷ್ಪಾದಿಗಳಿಂದ ಪೂಜಿಸಿ, ಯೋನಿಮುದ್ರೆಯನ್ನು ಪ್ರದರ್ಶಿಸಿ ನಮಸ್ಕಾರಮಾಡಿ,

೩೪- ೫ ಮೂಲಮಂತ್ರದಿಂದ ಏಳಾವರ್ತಿ ಅಭಿಮಂತ್ರಿಸಿ ಅಮೃತಮಯ ಕಲಶವನ್ನು ಷೋಡಶೋಪಚಾರಗಳಿಂದ ಪೂಜಿಸಿ ಆ ಉದಕದಿಂದ ಪೂಜಾಸಾಮಗ್ರಿಗಳನ್ನು ಪ್ರೋಕ್ಷಣೆಮಾಡಿ ಸಮಸ್ತವೂ ಶ್ರೀವಿದ್ಯಾಸ್ವರೂಪವೆಂದು ಭಾವಿಸಬೇಕು.

೩೪- ೯ ವಿಶೇಷಾರ್ಘ್ಯಪಾತ್ರದ ದಕ್ಷಿಣದಿಕ್ಕಿನಲ್ಲಿ ಸಾಮಾನ್ಯಾರ್ಘ್ಯೋದಕದಿಂದ ತ್ರಿಕೋಣ-ವೃತ್ತ-ಚತುರಶ್ರಾತ್ಮಕವಾದ ಮಂಡಲವನ್ನು ಮತ್ಸ್ಯಮುದ್ರೆ ಪೂರ್ವಕವಾಗಿ ಬರೆದು

೩೪-೧೩ ಆ ಮಂಡಲವನ್ನು ಪೂಜಿಸಿ ಅದರಮೇಲೆ ಶುದ್ಧಿಪಾತ್ರೆಯನ್ನು ಇಟ್ಟು ಹುಂ ಫಟ್ ಎಂದು ಎಂಟಾವರ್ತಿ ಅಭಿಮಂತ್ರಿಸಬೇಕು.

ಪುಟ ಪಙ್ಕ್ತಿ

೩೬-೧ ಮೇಲೆ ಹೇಳಿದ ಪಂಚಬ್ರಹ್ಮಮಂತ್ರಗಳಿಂದ ಪೂಜಿಸಿ ಶುದ್ಧಿ ಪಾತ್ರೆಯ ಕೆಳಗೆ ತ್ರಿಕೋಣ-ವೃತ್ತ-ಚತುರಶ್ರಾತ್ಮಕವಾದ ಎರಡು ಮಂಡಲಗಳನ್ನೂ ಬರೆಯಬೇಕು. ಪ್ರಥಮಮಂಡಲದಲ್ಲಿ—

೩೬-೫ ಗುರುಪಾತ್ರೆಯನ್ನೂ

೩೬-೭ ಎರಡನೆಯ ಮಂಡಲದಲ್ಲಿ ಆತ್ಮಪಾತ್ರೆಯನ್ನೂ ಇರಿಸಿ

೩೬-೧೦ ವಿಶೇಷಾರ್ಘ್ಯಪಾತ್ರೆಯನ್ನು ಕೈಯಿಂದ ಸ್ಪರ್ಶನಮಾಡಿ ಮುಂದೆ ಹೇಳುವ ೯೪ ಮಂತ್ರಗಳಿಂದ ಅಭಿಮಂತ್ರಿಸಬೇಕು

೪೩-೭ ಈ ರೀತಿ ಅಭಿಮಂತ್ರಿಸಿದ ವಿಶೇಷಾರ್ಘ್ಯಪಾತ್ರೆಯಿಂದ ಸ್ವಲ್ಪ ನೀರನ್ನು ಗುರುಪಾತ್ರೆಯಲ್ಲಿ ಹಾಕಿ ಗುರುತ್ರಯವನ್ನು (ಪರಮ ಗುರು ಮೊದಲಾದ ಮೂರು ಗುರುಗಳನ್ನು) ಆರಾಧಿಸಬೇಕು. ತನ್ನ ಗುರುವು ಸಮೀಪದಲ್ಲಿದ್ದರೆ ವಿಜ್ಞಾಪನೆಮಾಡಿಕೊಳ್ಳಬೇಕು. ಮತ್ತು ವಿಶೇಷಾರ್ಘ್ಯಪಾತ್ರೆಯಿಂದ ಸ್ವಲ್ಪಜಲವನ್ನು ಆತ್ಮಪಾತ್ರೆಯಲ್ಲಿ ಹಾಕಿ ಮೂಲಾಧಾರಚಕ್ರದಲ್ಲಿ ಅನಾದಿ ವಾಸನೆ (ಕರ್ಮವಾಸನೆ) ಯೆಂಬ ಕಾಷ್ಠವನ್ನು ದಹಿಸುತ್ತಾ ಪ್ರಜ್ವಲಿಸುತ್ತಿರುವ ಚಿದಗ್ನಿಮಂಡಲವನ್ನು ಧ್ಯಾನಿಸಬೇಕು.

೪೪-೧೧ ಮೇಲಿನ ಮಂತ್ರಗಳನ್ನು ಉಚ್ಚರಿಸಿ—ಇಲ್ಲಿಂದ ಮುಂದಕ್ಕೆ ಪ್ರಾಣಬುದ್ಧಿದೇಹಾದಿಗಳಿಂದ ಜಾಗ್ರತ್ಸ್ವಪ್ನಸುಷುಪ್ತ್ಯಾದ್ಯವಸ್ಥೆಗಳಲ್ಲಿ ಮನೋವಾಕ್ಕಾಯಕರ್ಮಗಳಿಂದಲೂ, ಕೈಗಳು, ಕಾಲುಗಳು, ಉದರ, ಶಿಶ್ನ ಮುಂತಾದ ಕರ್ಮೇಂದ್ರಿಯಗಳಿಂದಲೂ ನಾನು ಮಾಡುವ ಕರ್ಮವೆಲ್ಲವೂ ಬ್ರಹ್ಮಾರ್ಪಣವಾಗಲೆಂದು ಉದ್ದೇಶಿಸಿ ಪೂರ್ಣಾಹುತಿಯನ್ನು ಕೊಟ್ಟಂತೆ ಭಾವಿಸಬೇಕು.

೪೪-೨೦ ಈ ಮಂತ್ರದಿಂದ ಕುಂಡಲಿನೀರೂಪದಿಂದಿರುವ ಚಿದಗ್ನಿಯಲ್ಲಿ ಹೋಮಮಾಡಿದಂತೆ ಭಾವಿಸಿ ವಿಶೇಷಾರ್ಘ್ಯಪಾತ್ರೆಯಿಂದ ಸ್ವಲ್ಪ ಹಾಲನ್ನು ಕಾರಣಕಲಶದಲ್ಲಿ ಹಾಕಬೇಕು.

ಪುಟ ಪಙ್ಕ್ತಿ

೪೨- ೫ ಈ ರೀತಿ ಸಮಸ್ತದೋಷವನ್ನೂ ಕಳೆದುಕೊಂಡು ಶುದ್ಧವಾದ ಬಳಿಕ ಮೂಲಾಧಾರಚಕ್ರದಿಂದ ಬ್ರಹ್ಮರಂಧ್ರದ ವರೆಗೆ ಕಮಲನಾಳದಂತೆ ಪ್ರಕಾಶಮಾನವಾಗಿ ಹಬ್ಬಿ ಮಿಂಚಿನ ಸಮೂಹದಂತೆಯೂ ಹತ್ತುಸಾವಿರ ಸೂರ್ಯರಂತೆಯೂ ಅತಿಪ್ರಕಾಶಮಾನವಾದ ಮತ್ತು ಅಮೃತಕಿರಣಗಳಂತೆ ಶೀತಳವಾಗಿಯೂ, ದಂಡಾಕಾರವಾಗಿಯೂ ಇರುವ ಚಿತ್ಸ್ವರೂಪವಾದ ತೇಜೋವಿಶೇಷವನ್ನು ಧ್ಯಾನಿಸಬೇಕು.

೪೫- ೯ (೧) ಬಳಿಕ ಆ ತೇಜಸ್ಸಿನಲ್ಲಿ ಮೂಲಾಧಾರಚಕ್ರದಿಂದ ಕೆಳಗಡೆ ಸಹಸ್ರದಳ ಪದ್ಮಗಳಿಂದ ಶೋಭಿಸುವ ಭೂಪುರದಲ್ಲಿರುವ ಸರ್ವಸಂಕ್ಷೋಭಿಣ್ಯಾದಿ ದಶಪ್ರಕಟಯೋಗಿನಿಯರನ್ನೂ

(೨) ಅದರ ಮೇಲೆ ವಿಷುವತ್ ಎಂಬ ಅಭಿಧಾನದಿಂದಿರುವ ಕೆಂಪು ಬಣ್ಣದ ಆರುದಳಗಳಿಂದ ಕೂಡಿದ ಪದ್ಮದಲ್ಲಿ ಹದಿನಾರು ದಳಗಳಲ್ಲಿರುವ ಕಾಮಾಕರ್ಷಿಣ್ಯಾದಿ ಹದಿನಾರುಮಂದಿ ಗುಪ್ತಯೋಗಿನಿಯರನ್ನೂ

(೩) ಮೂಲಾಧಾರಚಕ್ರದಲ್ಲಿರುವ ಚತುರ್ದಲಪದ್ಮದಲ್ಲಿ ಅನಂಗಕುಸುಮಾದಿ ಎಂಟು ಮಂದಿ ಗುಪ್ತತರ ಯೋಗಿನಿಯರನ್ನೂ

(೪) ಸ್ವಾಧಿಷ್ಠಾನಚಕ್ರದಲ್ಲಿರುವ ಷಡ್ದಲಪದ್ಮದಲ್ಲಿ ಸರ್ವಸಂಕ್ಷೋಭಿಣೀ ಶಕ್ತ್ಯಾದಿ ಹದಿನಾಲ್ಕು ಮಂದಿ ಸಂಪ್ರದಾಯಯೋಗಿನಿಯರನ್ನೂ

(೫) ಮಣಿಪೂರಕಚಕ್ರದಲ್ಲಿರುವ ದಶದಲಪದ್ಮದಲ್ಲಿ ಸರ್ವಸಿದ್ಧಿಪ್ರದಾ ಮೊದಲಾದ ಹತ್ತು ಮಂದಿ ಕುಲೋತ್ತೀರ್ಣಯೋಗಿನಿಯರನ್ನೂ

(೬) ಅನಾಹತಚಕ್ರದಲ್ಲಿರುವ ದ್ವಾದಶದಲಕಮಲದಲ್ಲಿ ಸರ್ವಜ್ಞಾದೇವಿಯೇ ಮೊದಲಾದ ಹತ್ತು ಮಂದಿ ನಿಗರ್ಭಯೋಗಿನಿಯರನ್ನೂ

ಪುಟ ಸಂಖ್ಯೆ

(೭) ವಿಶುದ್ಧಿಚಕ್ರದಲ್ಲಿರುವ ಷೋಡಶದಲಪದ್ಮದಲ್ಲಿ ವಶಿನೀ ವಾಗ್ದೇವತಾ ಮೊದಲಾದ ಎಂಟು ಮಂದಿ ರಹಸ್ಯ ಯೋಗಿನಿಯರನ್ನೂ

(೮) ಲಂಬಿಕಾಗ್ರದಲ್ಲಿ ಬಾಣಶಕ್ತಿ, ಧನುಶ್ಶಕ್ತಿ, ಪಾಶಶಕ್ತಿ, ಅಂಕುಶಶಕ್ತಿ ಎಂಬ ನಾಲ್ಕು ಮಂದಿ ಆಯುಧ ದೇವಿಯರನ್ನೂ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾ ಶಕ್ತಿಯೆಂಬ ಮೂರುಮಂದಿ ತ್ರಿಕೋಣದೇವಿಯ ರನ್ನೂ (ಅತಿರಹಸ್ಯ ಯೋಗಿನಿಯರನ್ನೂ)

(೯) ಆಜ್ಞಾಚಕ್ರದಲ್ಲಿರುವ ದ್ವಿದಲಪದ್ಮದಲ್ಲಿ ಬಿಂದುವಿನಲ್ಲಿ ನೆಲಸಿರುವ ಶ್ರೀಲಲಿತಾಮಹಾತ್ರಿಪುರಸುಂದರೀದೇವಿ ಯನ್ನೂ (ಪರಾಪರಾತಿರಹಸ್ಯಯೋಗಿನಿಯನ್ನೂ) ಧ್ಯಾನಿಸಬೇಕು

೭೬-೧ ಈ ರೀತಿಯಾಗಿ ಧ್ಯಾನಿಸಿ ಆ ದೇವಿಯರ ಎದುರಿಗೆ ತಾನು ಪುಷ್ಪಾಂಜಲಿಯನ್ನು ಧರಿಸಿ ನಿಂತಿರುವಂತೆ ಭಾವಿಸುತ್ತಾ ಆಯಾ ಪೂಜಾಮಂತ್ರಗಳಿಂದ ಆಯಾ ಆವರಣಪೂಜೆಗಳನ್ನು ದೇವಿಯ ಎಡಗೈಯಲ್ಲಿ ಸಮರ್ಪಣೆಮಾಡಿದಂತೆ ಭಾವಿಸ ಬೇಕು. ಬಳಿಕ ಚಕ್ರದಲ್ಲಿರುವ ಆವರಣದೇವತೆಗಳು ಶ್ರೀಮಹಾತ್ರಿಪುರಸುಂದರಿಯಲ್ಲಿ ಲೀನರಾದಂತೆ (ಐಕ್ಯರಾ ದಂತೆ) ಭಾವಿಸಬೇಕು. ಬಳಿಕ ದೇವೀಪಾದಮೂಲದಲ್ಲಿ ಜೀವಾತ್ಮನು ನಿಂತಿರುವಂತೆ ಭಾವಿಸಿ ಆ ದೇವಿಯನ್ನು ಸಾಧಕನು ತನ್ನ ಹೃದಯಕಮಲದಲ್ಲಿ ತಂದು ಸ್ಥಾಪಿಸಿ ತಾನು ಪುಷ್ಪಗಳಿಂದ ದೇವಿಯನ್ನು ಪೂಜಿಸುತ್ತಿರುವಂತೆ ಭಾವಿಸಬೇಕು ಅನಂತರ ದೇವಿಯ ಎದುರಿಗೆ ಐದು ಮಂದಿ ದೇವತೆಯರು ನಿಂತಿರುವಂತೆ ಭಾವಿಸಬೇಕು. ಆ ದೇವಿಯರು ಚಂದ್ರಮಂಡಲ ದಿಂದ ಜಿನುಗುತ್ತಿರುವ ಅಮೃತಸ್ವರೂಪಿಣಿಯರಾಗಿಯೂ, ತಮ್ಮ ಕರಕಮಲಗಳಲ್ಲಿ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ,

ಪುಟ ಪಙ್ಕ್ತಿ

ನೀರಾಜನ ಮೊದಲಾದ ಪೂಜಾಸಾಮಗ್ರಿಗಳನ್ನು ಧರಿಸಿರುವವರೂ, ಹಳದಿ, ಕಪ್ಪು, ಶ್ಯಾಮ, ಕೆಂಪು, ಬಿಳುಪು ಎಂಬ ಪಂಚವರ್ಣಯುಕ್ತವಾದ ಶರೀರಕಾಂತಿಯಿಂದ ಬೆಳಗುವವರೂ ಭೂಮಿ, ಆಕಾಶ, ಅಗ್ನಿ, ವಾಯು, ಜಲ ಎಂಬ ಪಂಚಭೂತಾತ್ಮಕ ಶರೀರವುಳ್ಳವರೂ, ಸರ್ವಾವಯವಸುಂದರಿಯರೂ ಆಗಿರುವರೆಂದು ಭಾವಿಸಬೇಕು ಮತ್ತು ಆ ಐದು ಜನ ದೇವತೆಯರು ದೇವಿಗೆ ಗಂಧಾದ್ಯುಪಚಾರಗಳನ್ನು ಮಾಡುತ್ತಿರುವಂತೆ ಮತ್ತೆ ಮತ್ತೆ ಭಾವಿಸಿ ಪಂಚೋಪಚಾರಮುದ್ರೆಗಳನ್ನು ಪ್ರದರ್ಶಿಸಬೇಕು.

೪೬–೧೪ ಅನಂತರ ದೇವಿಯ ನಾಸಿಕದಲ್ಲಿ ಗಂಧಾಭಿಮಾನಿದೇವತೆಯನ್ನೂ, ಕಿವಿಗಳಲ್ಲಿ ಪುಷ್ಪಾಭಿಮಾನಿದೇವತೆಯನ್ನೂ, ನಾಭಿಯಲ್ಲಿ ಧೂಪಾಭಿಮಾನಿದೇವತೆಯನ್ನೂ, ಕಣ್ಣುಗಳಲ್ಲಿ ದೀಪಾಭಿಮಾನಿ ದೇವತೆಯನ್ನೂ, ನಾಲಗೆಯಲ್ಲಿ ನೈವೇದ್ಯಾಭಿಮಾನಿ ದೇವತೆಯನ್ನೂ ಐಕ್ಯವಾದಂತೆ ಭಾವಿಸಿ ಮೂಲಮಂತ್ರವನ್ನು ಉಚ್ಚರಿಸುತ್ತಾ ಜೀವಾತ್ಮನು (ಸಾಧಕನು) ಶ್ರೀದೇವಿಯ ಪಾದಮೂಲಗಳಲ್ಲಿ ಐಕ್ಯವಾದಂತೆ ಭಾವಿಸಬೇಕು ಮತ್ತು ತನ್ನ ಹೃದಯದಲ್ಲಿ ಜ್ಯೋತಿಸ್ಸ್ವರೂಪದಿಂದ ಬೆಳಗುತ್ತಿರುವ ದೇವಿಯ ರೂಪವನ್ನು ಧ್ಯಾನಿಸುತ್ತಾ ಸಂಕ್ಷೋಭಿಣ್ಯಾದಿದಶಮುದ್ರೆಗಳನ್ನು ಪ್ರದರ್ಶಿಸಬೇಕು. ಸ್ವಲ್ಪಕಾಲ ಮತ್ತೇನನ್ನೂ ಚಿಂತಿಸದೆ ಮೌನವಾಗಿರಬೇಕು.

೪೭– ೧ ಅನಂತರ ದೇವಿಯು ತನ್ನ ಮನಸ್ಸನ್ನು ಪ್ರೇರಿಸಿದಂತೆ ಭಾವಿಸಿ, ಪ್ರಕೃತಿಸ್ವರೂಪವನ್ನು ಕೈಗೊಂಡು ತೇಜೋರೂಪದಿಂದ ಬೆಳಗುತ್ತಾ ಪರಶಿವಸ್ವರೂಪವಾದ ಜ್ಯೋತಿಯಿಂದ ಬೇರೆಯಲ್ಲದುದೂ, ಆಕಾಶಾದಿ ಸಮಸ್ತ ವಿಶ್ವಕ್ಕೂ ಕಾರಣಭೂತವಾದುದೂ ಸಮಸ್ತವನ್ನೂ ತನ್ನ ತೇಜಸ್ಸಿನಿಂದ ಬೆಳಗುತ್ತಿರುವುದೂ, ತನ್ನಿಂದ (ಸಾಧಕನಿಂದ) ಬೇರೆಯಾದುದೂ ಆದ

ಪುಟ ೫೫೨

ಪರಂಜ್ಯೋತಿಯನ್ನು ಸುಷುಮ್ನಾನಾಡಿಯಿಂದ ಹೊರಡಿಸಿ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಪ್ರಕಾಶಮಾನವಾದ ಸಹಸ್ರದಳಪದ್ಮದಿಂದ ಹೊರಹೊರಟು ನಾಸಾಪುಟದ ಮಾರ್ಗವಾಗಿ ಬರುತ್ತಿರುವ ಆ ಜ್ಯೋತಿಸ್ಸ್ವರೂಪವನ್ನು ತ್ರಿಖಂಡಮುದ್ರೆಯಿಂದ ಶೋಭಿಸುತ್ತಿರುವ ಪುಷ್ಪಗಳನ್ನು ಧರಿಸಿರುವ ತನ್ನ ಅಂಜಲಿಪುಟದಲ್ಲಿ (ಎಂದರೆ ಕೈಗಳಲ್ಲಿ) ತಂದಂತೆ ಭಾವಿಸಿ—ಓಂ ಐಂ ಹ್ರೀಂ ಶ್ರೀಂ ಸೌಃ ಶ್ರೀಲಲಿತಾಯಾಃ ಅವ್ಯಕ್ತಚೈತನ್ಯಮೂರ್ತಿಂ ಕಲ್ಪಯಾಮಿ ನಮಃ—ಎಂಬ ಮಂತ್ರವನ್ನು ಉಚ್ಚರಿಸುತ್ತಾ ಮುಂದೆ ಹೇಳುವಂತೆ ದೇವಿಯ ದಿವ್ಯರೂಪವನ್ನು ಮನಸ್ಸಿನಲ್ಲಿ ಧ್ಯಾನಮಾಡಬೇಕು.

೪೭-೧೧ ದೇವಿಯು ನಿರ್ಬಾಧಿತವಾದ ಸಮಸ್ತವಸ್ತುಸ್ವರೂಪಿಣಿಯು. ಮೂರು ಲೋಕಗಳನ್ನೂ ತನ್ನ ಮಾಯೆಯಿಂದ ಮೋಹಗೊಳಿಸುವವಳು. ಪ್ರಪಂಚದಲ್ಲಿ ನಡೆಯುತ್ತಿರುವ ಸಮಸ್ತ ವ್ಯವಹಾರಗಳಿಗೂ ಕಾರಣಭೂತಳಾದವಳು. ಪರಾಪರಸ್ವರೂಪಳು. ಸಹಸ್ರಸೂರ್ಯರು ಏಕಕಾಲದಲ್ಲಿ ಉದಯಿಸಿದರೆ ಉಂಟಾಗುವ ಮಹಾಜ್ಯೋತಿಯಿಂದ ಬೆಳಗುತ್ತಿರುವವಳು. ದಾಳಿಂಬೇಗಿಡದ ಪುಷ್ಪದಂತೆಯೂ, ಜಪಾಪುಷ್ಪದಂತೆಯೂ ಸ್ವಲ್ಪ ಕೆಂಪಾದ ಶರೀರಕಾಂತಿಯಿಂದ ಒಪ್ಪುತ್ತಿರುವಳು. ಮತ್ತು ಆ ದೇವಿಯ ಶರೀರಕಾಂತಿಯು ಪದ್ಮರಾಗಮಣಿಯಂತೆಯೂ ಅರಳುತ್ತಿರುವ ಪದ್ಮದಂತೆಯೂ, ಪುಟವಿಕ್ಕಿದ ಚಿನ್ನದಂತೆಯೂ ಥಳಥಳಿಸುತ್ತಿರುವ ಶರೀರಕಾಂತಿಯಿಂದ ಶೋಭಿಸುತ್ತಿರುವಳು. ಆ ದೇವಿಯ ಪಾದಕಮಲಗಳು ಕೆಂಪು ತಾವರೆ ಹೂಗಳಂತೆ ಬಹು ಕೋಮಲವಾಗಿರುವವು. ಕಾಲುಗಳಲ್ಲಿ ಅಮೂಲ್ಯವಾದ ರತ್ನಗಳಿಂದ ನಿರ್ಮಿತವಾದ ಆಭರಣಗಳನ್ನು ಧರಿಸಿರುವಳು. ದೇವಿಯು ಕಾಲುಬೆರಳುಗಳಲ್ಲಿ

ಪುಟ ಪಙ್ಕ್ತಿ

ಧರಿಸಿರುವ ಕಾಲುಂಗರಗಳ ರತ್ನಕಾಂತಿಯು ದಶದಿಕ್ಕುಗಳನ್ನೂ ಬೆಳಗುತ್ತಿರುವುದು. ದೇವಿಯ ತೊಡೆಗಳು ಬಾಳೆಯ ಕಂಬ ಗಳಂತೆ ಅತಿನುಣುಪಾಗಿಯೂ, ಕೋಮಲವಾಗಿಯೂ ಪ್ರಕಾಶಿಸುತ್ತಿರುವವು. ನಿತಂಬದಲ್ಲಿ ಮಹಾಪ್ರಕಾಶಮಾನವಾದ ರಕ್ತವಸ್ತ್ರಗಳನ್ನು ಧರಿಸಿರುವಳು. ಸೊಂಟದಲ್ಲಿ ಧರಿಸಿರುವ ಮೇಖಲೆಯಲ್ಲಿರುವ (ಡಾಬಿನಲ್ಲಿ) ಮಾಣಿಕ್ಯದ ಕಿರುಗಂಟೆಗಳು ಮಂಜುಳಧ್ವನಿಗೈಯುತ್ತಿರುವವು. ದೇವಿಯ ನಡುವು ಸಣ್ಣ ದಾಗಿಯೂ ನಾಭಿಯು ಮುಂದಕ್ಕೆ ಉಬ್ಬಿಕೊಂಡೂ ಇರುವುದು. ನಾಭಿಯಿಂದ ಹೊರಟ ರೋಮರಾಜಿಯು (ರೋಮ ಪಙ್ಕ್ತಿಯು) ಮೇಲೆ ಸ್ತನಗಳವರಿಗೂ ವ್ಯಾಪಿಸಿರುವುದು. ದೇವಿಯ ಸ್ತನಗಳು ದುಂಡಾಗಿಯೂ, ಕಠಿನವಾಗಿಯೂ ಮುಂದಕ್ಕೆ ಉಬ್ಬಿ ಚಾಚಿಕೊಂಡೂ ಇರುವವು. ಆ ಸ್ತನಗಳ ಮೇಲೆ ಅಮೌಲ್ಯವಾದ ಮುತ್ತಿನಹಾರವು ಶೋಭಿಸುತ್ತಿರು ವುದು. ಕತ್ತಿನಲ್ಲಿ ನವರತ್ನಖಚಿತವಾದ ದಿವ್ಯಕಂಠಾಭರಣವನ್ನು ಧರಿಸಿರುವಳು. ಕಿವಿಗಳಲ್ಲಿ ಧರಿಸಿರುವ ರತ್ನಖಚಿತ ಕರ್ಣಾ ಭರಣಗಳ ಕಾಂತಿಯು ಉದಯಿಸುತ್ತಿರುವ ಸೂರ್ಯನ ಕಾಂತಿ ಯನ್ನು ಹೋಲುತ್ತಾ ಕೆನ್ನೆಗಳ ಮೇಲೆ ಬಿದ್ದು ಮುಖಕಾಂತಿ ಯನ್ನು ಹೆಚ್ಚಿಸುತ್ತಿರುವವು. ದೇವಿಯ ಮುಖಕಮಲವು ಪೂರ್ಣಚಂದ್ರನಂತೆ ಆಹ್ಲಾದಕರವಾಗಿಯೂ ಪದ್ಮದಂತೆ ಕೋಮಲವಾಗಿಯೂ ಇರುವುದು. ಹುಬ್ಬುಗಳು ಮನ್ಮಥನ ಕಾರ್ಮುಕವನ್ನು ಅಲ್ಲಗಳೆಯುತ್ತಿರುವವು. ನೇತ್ರಗಳು ಅರಳಿ ರುವ ಕಮಲದಂತೆ ಸುಂದರವಾಗಿರುವವು. ಲಲಾಟದಲ್ಲಿ ಪ್ರಕಾಶಮಾನವೂ ರತ್ನಮಯವೂ ಆದ ತಿಲಕವು ಶೋಭಿಸು ತ್ತಿರುವುದು. ಶಿರಸ್ಸಿನಲ್ಲಿ ಮುತ್ತು ಮಾಣಿಕ್ಯ ಮೊದಲಾದ ಅನರ್ಘ್ಯರತ್ನಖಚಿತವಾದ ಕಿರೀಟವು ಒಪ್ಪುತ್ತಿರುವುದು. ಅದ ರಲ್ಲಿ ಚಂದ್ರಕಲೆಯು ಪ್ರಕಾಶಮಾನವಾಗಿ ಬೆಳಗುತ್ತಿರುವುದು.

ಪುಟ ಪಙ್ಕ್ತಿ

ದೇವಿಗೆ ಮೂರು ಕಣ್ಣುಗಳೂ, ಹವಳದ ಬಳ್ಳಿಗಳಂತೆ ಮೃದುವೂ ಪ್ರಕಾಶಮಾನವೂ ಆದ ನಾಲ್ಕು ಬಾಹುಗಳೂ ಇರುವವು. ದೇವಿಯ ನಾಲ್ಕು ಹಸ್ತಗಳಲ್ಲಿ ಇಕ್ಷುಕೋದಂಡ (ಎಂದರೆ ಬಿಲ್ಲು) ಪುಷ್ಪಮಯವಾದ ಬತ್ತಳಿಕೆ ಪಾಶ, ಅಂಕುಶಗಳು ಒಪ್ಪುತ್ತಿರುವವು. ಇಂತಹ ದೇವಿಯು ಸಮಸ್ತ ದೇವತೆಗಳ ಸ್ವರೂಪಳಾಗಿಯೂ ಸಮಸ್ತ ಸೌಭಾಗ್ಯಕ್ಕೆ ನಿಧಿಯಂತೆಯೂ ಇರುವಳು. ಸುಂದರಾಕಾರವುಳ್ಳವಳೂ ಸಮಸ್ತ ತೀರ್ಥಸ್ವರೂಪಳೂ ಆಗಿರುವಳು. ಭಕ್ತರ ಸಮಸ್ತ ಇಷ್ಟಾರ್ಥಗಳನ್ನು ನೆರವೇರಿಸುವವಳು. ಸಮಸ್ತ ಮಂತ್ರಸ್ವರೂಪಳು, ನಾಶರಹಿತಳು, ಸಮಸ್ತ ವೇದ ಶಾಸ್ತ್ರಗಳಲ್ಲಿ ಪ್ರವೀಣೆಯು, ಸಮಸ್ತ ಕ್ಷೇತ್ರಸ್ವರೂಪಳು. ಸಮಸ್ತ ವಿದ್ಯೆಗಳು, ಯಜ್ಞಗಳು, ಸಮಸ್ತ ಶಾಸ್ತ್ರಗಳು, ವೇದಗಳು ತೀರ್ಥಕ್ಷೇತ್ರಾದಿಪವಿತ್ರಸ್ಥಳಗಳು ಇವುಗಳ ಸ್ವರೂಪಳು. ಆನಂದಸ್ವರೂಪಳು, ಜ್ಞಾನಗಳಿಗೆ ನಿಧಿಯು. ಪರಾಪರ ವಸ್ತುವೆನಿಸಿ ಸಚ್ಚಿದಾನಂದಸ್ವರೂಪಿಣಿಯಾಗಿ ಬೆಳಗುತ್ತಿರುವಳು. ಈ ರೀತಿಯಾಗಿ ದೇವಿಯನ್ನು ತನ್ನ ನಿಜ ಲೀಲೆಯಿಂದ ಭಕ್ತರ ಅನುಗ್ರಹಕ್ಕಾಗಿ ದಿವ್ಯರೂಪವನ್ನು ಧರಿಸಿರುವಂತೆ ಧ್ಯಾನಮಾಡಬೇಕು.

೪೯- ೨ ಎಲೌ ದೇವಿಯೇ, ಪೂಜಾರ್ಥವಾಗಿ ನಿನ್ನನ್ನು ಆವಾಹನೆ ಮಾಡುವೆನು. ನೀನು ದಯವಿಟ್ಟು ನಾನು ಆರಾಧನೆಮಾಡುವ ಸ್ಥಳಕ್ಕೆ ಬಂದು ನಾನು ಮಾಡುವ ಪೂಜೆಯನ್ನು ಸ್ವೀಕರಿಸಿ ಪೂಜೆಗೆ ವಿಘ್ನಗಳು ಒದಗದಂತೆ ರಕ್ಷಿಸಬೇಕು.

೪೯- ೫ ಎಲೌ ದೇವಿ, ನೀನು ಮಹಾಪದ್ಮವೆಂಬ ವನದಲ್ಲಿ ವಾಸಿಸುವವಳು, ಕಾರಣಾನಂದಶರೀರವುಳ್ಳವಳು, ಸಮಸ್ತಪ್ರಾಣಿಗಳಿಗೆ ಹಿತವನ್ನು ಉಂಟುಮಾಡುವುದರಲ್ಲಿ ಸರ್ವದಾ ಆಸಕ್ತಳು. ಸಮಸ್ತಪ್ರಪಂಚಕ್ಕೂ ತಾಯಿಯಂತಿರುವೆ. ಸಮಸ್ತದೇವತೆಗಳಿಂದಲೂ ಪೂಜಿಸಲ್ಪಡುವೆ. ಅಮೃತಪಾನದಲ್ಲಿ ಆಸಕ್ತಳು,

ಪುಟ ಪಙ್ಕ್ತಿ

ಭಕ್ತರಿಗೆ ಸುಲಭವಾಗಿ ಲಭ್ಯಳು. ಇಂತಹ ನೀನು ಸಮಸ್ತ ಆವರಣದೇವತೆಗಳೊಡನೆ ನಾನು ಪೂಜೆಮಾಡುವ ಸ್ಥಳಕ್ಕೆ ಬಂದು ಪೂಜೆಯು ಮುಗಿಯುವ ವರೆವಿಗೂ ಅಲ್ಲಿಯೇ ಸ್ಥಿರವಾಗಿ ನೆಲಸಿದ್ದು ನನ್ನನ್ನು ಅನುಗ್ರಹಿಸಬೇಕು.

ಈ ರೀತಿ ಸ್ತೋತ್ರಮಾಡಿ ಶ್ರೀಚಕ್ರದ ಬಿಂದುಪೀಠದಲ್ಲಿ ನೆಲೆಸಿರುವವಳೂ ಪರಬ್ರಹ್ಮಸ್ವರೂಪಳೂ, ಶ್ರೀಕಾಮೇಶ್ವರನ ತೊಡೆಯ ಮೇಲೆ ಕುಳಿತಿರುವವಳೂ ಆದ ಶ್ರೀಲಲಿತಾಮಹಾ ತ್ರಿಪುರಸುಂದರೀ ದೇವಿಯನ್ನು ಆವಾಹನೆಮಾಡುವೆನು ಎಂದು ಹೇಳಿ ಆವಾಹನಮಾಡಬೇಕು.

ದೇವಿಯನ್ನು ಆವಾಹನೆಮಾಡಿದ ಬಳಿಕ ನಿತ್ಯಾದಿಪರಿವಾರ ದೇವಿಯರನ್ನೂ ಆವಾಹನೆಮಾಡಬೇಕು. ಅವರನ್ನು ಆವಾಹನೆ ಮಾಡುವಾಗ ಎಲ್ಲಾ ವಿಚಾರದಲ್ಲಿಯೂ ಎಂದರೆ ವೇಷ ಭೂಷಣಾದಿಗಳಲ್ಲಿ ದೇವಿಯಂತೆಯೇ ಇರುವರೆಂದು ಭಾವಿಸಬೇಕು. ಆದರೆ ಪರಮೇಶ್ವರನ ಅಂಕದಲ್ಲಿ ಕುಳಿತಿರುವಂತೆ ಭಾವಿಸ ಬಾರದು. ಅದರಂತೆಯೇ ಓಘತ್ರಯಗುರುಮಂಡಲವನ್ನೂ ಆವರಣದೇವತೆಗಳನ್ನೂ ದೇವಿಯ ಎದುರಿಗೆ ಕುಳಿತಿರುವಂತೆ ಭಾವಿಸಿ ಆವಾಹನೆಮಾಡಬೇಕು.

೫೦-೧೧ ಆವಾಹನೆಯಾದ ಬಳಿಕ ಆವಾಹನಾದಿ ಷಣ್ಮುದ್ರೆಗಳನ್ನೂ, ಪಂಚನ, ಧೇನು, ಯೋನಿಮುದ್ರೆಗಳನ್ನೂ ಹೃದಯಾದಿಷಡಂಗ ಮುದ್ರೆಗಳನ್ನೂ, ಬಾಣಾದ್ಯಾಯುಧ ಮುದ್ರೆಗಳನ್ನೂ ಆಯಾ ಮಂತ್ರಪೂರ್ವಕವಾಗಿ ಪ್ರದರ್ಶಿಸಬೇಕು.

೫೧- ೨ ಬಳಿಕ ಪರದೇವತಾಸ್ವರೂಪಳಾದ ಶ್ರೀಮಹಾತ್ರಿಪುರಸುಂದರೀ ದೇವಿಗೆ ಅರವತ್ತುನಾಲ್ಕು ಉಪಚಾರಗಳಿಂದ ಕೂಡಿದ ಪೂಜೆಯನ್ನು ಮಾಡಬೇಕು. ವಿಸ್ತಾರವಾದ ಈ ಪೂಜೆಯನ್ನು ಮಾಡಲು ಶಕ್ತಿಯಿಲ್ಲದಿದ್ದರೆ ಸಾಧಕನು ಸಾಮಾನ್ಯಾರ್ಘ್ಯೋ ದಕವನ್ನು ದೇವಿಯ ಪಾದಮೂಲದಲ್ಲಿ (ಬೇರೆ ಪಾತ್ರೆಯಲ್ಲಿ)

ಪುಟ ಪಙ್ಕ್ತಿ

ಸ್ವಲ್ಪ ಬಿಟ್ಟು ಪೂಜೆಮಾಡಿದಂತೆ ಭಾವಿಸಿ ಪುಷ್ಪಾಕ್ಷತೆಗಳನ್ನು ಸಮರ್ಪಿಸಬೇಕು.

೬೮- ೨ ಶುಭ್ರವಾಗಿ ಬೆಳಗಿರುವ ತಟ್ಟೆ ಮೊದಲಾದ ಪಾತ್ರೆಗಳಲ್ಲಿ ಗಂಧ ಮೊದಲಾದ ಸುಗಂಧದ್ರವ್ಯಗಳಿಂದ ಆರು ಅಥವಾ ನಾಲ್ಕು ದಳಕಮಲಗಳನ್ನು ಬಿಟ್ಟು, ಎಂಟು ಹದಿನಾರು ಮೊದಲಾದ ದಳಗಳಿಂದ ಕೂಡಿದ ಕಮಲವನ್ನು ಚಂದ್ರಾಕಾರವಾಗಿ ಅಥವಾ ಗೋಲಾಕಾರವಾಗಿ ಬರೆದು ಸುತ್ತಲೂ ದಳಗಳನ್ನು ಕಡಲೆ ಅಥವಾ ಹೆಸರು ಹಿಟ್ಟಿನಿಂದ ರಚಿಸಬೇಕು. ಮತ್ತು ಹಾಲು, ಹಿಟ್ಟು, ಗೋಧಿಯ ಹಿಟ್ಟು, ಅಕ್ಕಿಯ ಹಿಟ್ಟು ಇವುಗಳನ್ನು ಕಲಸಿ ಅದರಿಂದ ತ್ರಿಕೋಣಶಿರಸ್ಕವಾದ ಡಮರುವೇ ಮೊದಲಾದ ಆಕಾರಗಳುಳ್ಳ ದೀಪಪಾತ್ರೆಗಳನ್ನು ರಚಿಸಿ ಆ ತಟ್ಟೆಯಲ್ಲಿ ಇಡಬೇಕು. ಆ ದೀಪಪಾತ್ರೆಗಳು ನಾಲ್ಕು ಅಂಗುಲ ಎತ್ತರವಾಗಿಯೂ ತುಪ್ಪದಲ್ಲಿ ಬೇಯಿಸಿದ್ದಾಗಿಯೂ ಇರಬೇಕು. ಇಂತಹ ದೀಪದ ಸ್ತಂಭಗಳು ಒಂಭತ್ತು ಏಳು ಅಥವಾ ಐದು ಇರಬೇಕು. ಆ ದೀಪಪಾತ್ರೆಗಳಲ್ಲಿ ಹಸುವಿನ ತುಪ್ಪವನ್ನು ತುಂಬಿ ಕರ್ಪೂರಮಿಶ್ರಿತವಾದ ಬತ್ತಿಯನ್ನು ಹಾಕಿ ಹೊತ್ತಿಸಬೇಕು.

೬೮-೧೧ ಈ ನವಬೀಜಾಕ್ಷರಗಳನ್ನು ಉಚ್ಚರಿಸಿ ಮೂಲಮಂತ್ರದಿಂದ ಅಭಿಮಂತ್ರಿಸಿ ಚಕ್ರಮುದ್ರೆಯನ್ನು ಪ್ರದರ್ಶಿಸಬೇಕು.

೬೮-೧೩ ಈ ಮಂತ್ರದಿಂದ ಘಂಟೆಗೆ ಗಂಧಾಕ್ಷತಾದಿಗಳಿಂದ ಪೂಜಿಸಿ ಆ ಘಂಟೆಯನ್ನೇ ಬಾರಿಸುತ್ತಾ ಮಂಡಿಯನ್ನು ಭೂಮಿಯ ಮೇಲೂರಿಕೊಂಡು ನೀರಾಜನಪಾತ್ರವನ್ನು ಶಿರಸ್ಸಿನವರಿಗೂ ಮೇಲಕ್ಕೆತ್ತಿ,

೬೯- ೫ ವೇದಮಂತ್ರ ಪಠನಪೂರ್ವಕವಾಗಿ ದೇವಿಯ ಶಿರಸ್ಸಿನಿಂದ ಹಿಡಿದು ಪಾದದವರಿವಿಗೂ ಪ್ರದಕ್ಷಿಣಾಕಾರವಾಗಿ ಒಂಭತ್ತಾವರ್ತಿ ನೀರಾಜನವನ್ನು ಬೆಳಗಬೇಕು.

ಪುಟ ಪಙ್ಕ್ತಿ

೭೧- ೨ ದೇವಿಯ ಮುಂದುಗಡೆ ತನ್ನ (ಸಾಧಕನ) ಬಲಭಾಗದಲ್ಲಿ ಚತುರಶ್ರವಾದ (ಚಾಕ) ಮಂಡಲವನ್ನು ಮಾಡಿ ಅದರಮೇಲೆ ನೈವೇದ್ಯಕ್ಕಾಗಿ ಸಿದ್ಧಪಡಿಸಿರುವ ಫಲಭಕ್ಷ್ಯಾದಿಗಳನ್ನು ಇರಿಸಿ ಮೂಲಮಂತ್ರದಿಂದ ಪ್ರೋಕ್ಷಣೆಮಾಡಿ ಧೇನುಮುದ್ರೆಯನ್ನು ಪ್ರದರ್ಶಿಸಿ ಮತ್ತೆ ಮೂಲಮಂತ್ರದಿಂದ ಮೂರಾವರ್ತಿ ಅಭಿಮಂತ್ರಿಸಿ ಆಪೋಶನವನ್ನು ಹಾಕಬೇಕು.

೭೨- ೩ ನೈವೇದ್ಯಾನಂತರ ಸುಗಂಧಯುಕ್ತವಾದ ಜಲವೇ ಮೊದಲಾದ ಪಾನೀಯವನ್ನು ಸಮರ್ಪಿಸಿ ಉತ್ತರಾಪೋಶನವನ್ನು ಹಾಕಬೇಕು. ಬಳಿಕ ಹಸ್ತಪ್ರಕ್ಷಾಳನ (ಕೈತೊಳೆದುಕೊಳ್ಳುವುದು) ಗಂಡೂಷ (ಬಾಯಿಮುಕ್ಕಳಿಸುವುದು) ಆಚಮನ, ತಾಂಬೂಲ ಇವುಗಳನ್ನು ಕ್ರಮವಾಗಿ ಅರ್ಪಿಸಬೇಕು.

೮೨-೧೨ ಈ ರೀತಿಯಾಗಿ ಚತುರಾಯತನ ಪೂಜೆಯನ್ನು ಮುಗಿಸಿ ದೇವಿಯ ವಾಮಹಸ್ತದಲ್ಲಿ ಸಾಮಾನ್ಯಾರ್ಘ್ಯೋದಕದಿಂದ ಪೂಜಾಸಮರ್ಪಣೆಯನ್ನು ಮಾಡಬೇಕು.

## || ಗುರುಮಂಡಲಾರ್ಚನಂ ||

೯೦-೧೨ ಈ ವಿಧವಾದ ಗುರುಮಂಡಲವನ್ನು ಬರೆದು ಮಧ್ಯದಲ್ಲಿರುವ
ಮತ್ತು ಬಿಂದುವಿನಲ್ಲಿ ಮಹಾಪಾದುಕವನ್ನು ತ್ರಿಕೋಣದ ವಾಮರೇಖೆ
೯೨-೧೦ (A) ಪೂರ್ವರೇಖೆ (B) ದಕ್ಷರೇಖೆ (C) ಗಳಲ್ಲಿ ಗುರುಮಂಡಲತ್ರಯವನ್ನೂ, ಮೂರುರೇಖೆಗಳಲ್ಲಿ ಪ್ರಥಮ ರೇಖೆಯಲ್ಲಿ (1) ದಿವ್ಯೌಘವನ್ನೂ, ದ್ವಿತೀಯ ರೇಖೆಯಲ್ಲಿ (2) ಸಿದ್ಧೌಘವನ್ನೂ ತೃತೀಯ ರೇಖೆಯಲ್ಲಿ (3) ಮಾನವೌಘವನ್ನೂ ಪೂಜಿಸಬೇಕು.

೯೫-೧೮ ಇದಲ್ಲದೆ (1) ಪ್ರಥಮರೇಖೆಯಲ್ಲಿ ಕೆಳಗೆ ಕೊಟ್ಟಿರುವ ಪರಮೇಷ್ಠಿಗುರು ಮಂತ್ರದಿಂದ ಪರಮೇಷ್ಠಿಗುರುವನ್ನೂ (2) ದ್ವಿತೀಯ ರೇಖೆಯಲ್ಲಿ ಪರಮಗುರುಮಂತ್ರದಿಂದ ಪರಮ

ಪುಟ ಪಙ್ಕ್ತಿ

ಗುರುವನ್ನೂ (3) ತೃತೀಯರೇಖೆಯಲ್ಲಿ ಸ್ವಗುರುಮಂತ್ರ ದಿಂದ ಸ್ವಗುರುವನ್ನೂ ಪೂಜಿಸಬೇಕು.

೯೭- ೧ ಆವಾಹನಾನಂತರ ಧ್ಯಾನಾದಿಷೋಡಶೋಪಚಾರಪೂಜೆಯನ್ನು ಮಾಡಬೇಕು.

೧೧೧- ೩ ಶ್ರೀಚಕ್ರದಲ್ಲಿರುವ ಚತುರಶ್ರಾತ್ಮಕವಾದ ಭೂಪುರದಲ್ಲಿ ಪ್ರಥಮಾವರಣಪೂಜೆಯನ್ನು ಮಾಡಬೇಕು. ಈ ಆವರಣ ಪೂಜೆಯಲ್ಲಿಯೂ ಮುಂದಿನ ಆವರಣಪೂಜೆಗಳಲ್ಲಿಯೂ ಆಯಾ ಸಂಖ್ಯೆಯಿಂದ ತೋರಿಸಿರುವ ಮಂತ್ರಗಳಿಂದ ಆಯಾ ಸಂಖ್ಯೆಯನ್ನು ಗುರುತುಮಾಡಿರುವ ಪ್ರದೇಶಗಳಲ್ಲಿ ಪೂಜಿಸ ಬೇಕು.

೧೧೧-೧೦ ಈ ಮಂಡಲದಲ್ಲಿ (ತ್ರೈಲೋಕ್ಯಮೋಹನಚಕ್ರ) ಅಣಿಮಾ ಸಿದ್ಧಿಯಿಂದ ಸರ್ವಕಾಮಸಿದ್ಧಿಯವರೆಗೆ ೧೦ ದೇವಿಯರು ಮತ್ತು ಎರಡನೆಯ ಮಂಡಲದಲ್ಲಿ ಬ್ರಾಹ್ಮೀಮಾತೃವಿನಿಂದ ಮಹಾಲಕ್ಷ್ಮೀಮಾತೃವಿನವರೆಗೆ ೮ ದೇವಿಯರು ಮತ್ತೆ ಪ್ರಥಮಮಂಡಲದಲ್ಲಿ ಸರ್ವಸಂಕ್ಷೋಭಿಣಿಯಿಂದ ಸರ್ವ ತ್ರಿಖಂಡಾವರೆಗೆ ೧೦ ದೇವಿಯರು (ಪ್ರಕಟಯೋಗಿನೀದೇವಿ ಯರು) ಇವರುಗಳನ್ನು ಆಯಾ ಸ್ಥಾನಗಳಲ್ಲಿ ಪೂಜಿಸಬೇಕು.

೧೧೮- ೭ ಸರ್ವಾಶಾಪರಿಪೂರಕಚಕ್ರವೆಂಬ ೧೬ ದಳಗಳ ವೃತ್ತದಿಂದ ಕೂಡಿರುವ ಈ ದ್ವಿತೀಯಾವರಣದಲ್ಲಿ ಕಾಮಾಕರ್ಷಿಣಿಯಿಂದ ಶರೀರಾಕರ್ಷಿಣೀ ವರೆಗೆ ೧೬ ದೇವಿಯರನ್ನು (ಗುಪ್ತಯೋಗಿನೀ ದೇವಿಯರು) ಪೂಜಿಸಬೇಕು.

೧೨೨- ೯ ಸರ್ವಸಂಕ್ಷೋಭಣಚಕ್ರವೆಂಬ ೮ ದಳಗಳ ವೃತ್ತದಿಂದ ಕೂಡಿರುವ ಈ ತೃತೀಯಾವರಣದಲ್ಲಿ ಅನಂಗಕುಸುಮಾ ದೇವಿಯಿಂದ ಅನಂಗಮಾಲಿನೀದೇವಿಯವರೆಗೆ ೮ ದೇವಿಯ ರನ್ನು (ಗುಪ್ತತರಯೋಗಿನೀದೇವಿಯರು) ಪೂಜಿಸಬೇಕು.

ಪುಟ ಪಙ್ಕ್ತಿ

೧೨೬- ೧ ಸರ್ವಸೌಭಾಗ್ಯದಾಯಕಚಕ್ರವೆಂಬ ೧೪ ಮೂಲೆಗಳುಳ್ಳ ಈ ನಾಲ್ಕನೆಯ ಆವರಣದಲ್ಲಿ ಸರ್ವಸಂಕ್ಷೋಭಿಣಿಯಿಂದ ಸರ್ವ ದ್ವಂದ್ವಕ್ಷಯಂಕರೀದೇವಿಯ ವರೆಗೆ ೧೪ ದೇವಿಯರನ್ನು (ಸಂಪ್ರದಾಯಯೋಗಿನೀದೇವಿಯರು) ಪೂಜಿಸಬೇಕು.

೧೩೦- ೧ ಸರ್ವಾರ್ಥಸಾಧಕಚಕ್ರವೆಂಬ ೧೦ ಮೂಲೆಗಳಿಂದ ಕೂಡಿದ ಈ ಐದನೆಯ ಆವರಣದಲ್ಲಿ ಸರ್ವಸಿದ್ಧಿಪ್ರದಾದೇವಿಯಿಂದ ಸರ್ವಸೌಭಾಗ್ಯದಾಯಿನೀದೇವಿಯ ವರೆಗೆ ೧೦ ದೇವಿಯರನ್ನು (ಕುಲೋತ್ತೀರ್ಣಯೋಗಿನೀದೇವಿಯರು) ಪೂಜಿಸಬೇಕು.

೧೩೩- ೬ ಸರ್ವರಕ್ಷಾಕರಚಕ್ರವೆಂಬ ೧೦ ಮೂಲೆಗಳಿಂದ ಕೂಡಿದ ಈ ಆರನೆಯ ಆವರಣದಲ್ಲಿ ಸರ್ವಜ್ಞಾದೇವಿಯಿಂದ ಸರ್ವೇಪ್ಸಿತ ಫಲಪ್ರದಾದೇವಿಯ ವರೆಗೆ ೧೦ ದೇವಿಯರನ್ನು (ನಿಗರ್ಭ ಯೋಗಿನೀದೇವಿಯರು) ಪೂಜಿಸಬೇಕು.

೧೩೬- ೯ ಸರ್ವರೋಗಹರಚಕ್ರವೆಂಬ ೮ ಮೂಲೆಗಳುಳ್ಳ ಈ ಏಳನೆಯ ಆವರಣದಲ್ಲಿ ವಶಿನೀವಾಗ್ದೇವತಾದೇವಿಯಿಂದ ಕೌಲಿನೀ ವಾಗ್ದೇವತಾದೇವಿಯ ವರೆಗೆ ೮ ದೇವಿಯರನ್ನು (ರಹಸ್ಯ ಯೋಗಿನೀದೇವಿಯರು) ಪೂಜಿಸಬೇಕು.

೧೪೦- ೧ ಸರ್ವಸಿದ್ಧಿಪ್ರದಚಕ್ರವೆಂಬ ತ್ರಿಕೋಣಾತ್ಮಕವಾದ ಈ ಎಂಟನೆಯ ಆವರಣದಲ್ಲಿ ಬಾಣಶಕ್ತಿಯಿಂದ ಅಂಕುಶಶಕ್ತಿಯವರೆಗೆ ೪ ದೇವಿಯರನ್ನು (ಅತಿರಹಸ್ಯಯೋಗಿನೀದೇವಿಯರು) ಪೂಜಿಸಬೇಕು.

೧೪೪- ೧ ಸರ್ವಾನಂದಮಯಚಕ್ರವೆಂಬ ಬಿಂದುರೂಪಾತ್ಮಕವಾದ ಈ ಒಂಭತ್ತನೆಯ ಆವರಣದಲ್ಲಿ ಶ್ರೀಲಲಿತಾಮಹಾತ್ರಿಪುರಸುಂದರೀ ದೇವಿಯನ್ನು ಮಾತ್ರ (ಪರಾಪರಾತಿರಹಸ್ಯಯೋಗಿನೀದೇವಿ) ಪೂಜಿಸಬೇಕು.

೧೪೮- ೧ ಪಂಚಪಂಚಿಕಾಪೂಜಾ—ಈ ರೀತಿಯಾಗಿ ಐದು ಅಂತಸ್ತುಗಳುಳ್ಳ ಪೀಠವನ್ನು ಭಾವನೆಮಾಡಿ ಪ್ರತಿಯೊಂದು ಪೀಠದಲ್ಲಿಯೂ ಮಧ್ಯದಲ್ಲಿರುವ ಬಿಂದು, ವಾಯವ್ಯ, ಈಶಾನ್ಯ,

ಪುಟ ಪಙ್ಕ್ತಿ

ಆಗ್ನೇಯ, ನೈರ್ಋತ್ಯ ಕೋಣಗಳಲ್ಲಿ ಪಂಚಪಂಚಿಕಾಪೂಜೆಯನ್ನು ಮಾಡಬೇಕು.

I ನೇ ಪೀಠದಲ್ಲಿ ಪಂಚಲಕ್ಷ್ಮಿಯರು
II ನೇ ಪೀಠದಲ್ಲಿ ಪಂಚಕೋಶಾಂಬೆಯರು
III ನೇ ಪೀಠದಲ್ಲಿ ಪಂಚಕಲ್ಪಲತೆಯರು
IV ನೇ ಪೀಠದಲ್ಲಿ ಪಂಚಕಾಮದುಘೆಯರು
V ನೇ ಪೀಠದಲ್ಲಿ ಪಂಚರತ್ನಾಂಬೆಯರು

ಈ ರೀತಿಯಾಗಿ ಪ್ರತಿಪೀಠದಲ್ಲಿಯೂ ಐದು ಮಂತ್ರಗಳಿಂದ ಆಯಾ ಸ್ಥಳಗಳಲ್ಲಿ ಪೂಜಿಸಬೇಕು.

೨೪೫- ೨ ನೈವೇದ್ಯಾದ್ಯುಪಚಾರಾಃ—ದೇವಿಯು ಮುಂದುಗಡೆ ಸಾಮಾನ್ಯಾರ್ಘ್ಯೋದಕದಿಂದ ಚತುರಶ್ರವಾದ (ಚೌಕವಾದ) ಮಂಡಲವನ್ನು ಮಾಡಿ ಅದರ ಮೇಲೆ ಚಿನ್ನ, ಬೆಳ್ಳಿ ಅಥವಾ ತಾಮ್ರ ಮೊದಲಾದ ಲೋಹನಿರ್ಮಿತವಾದ ಪಾತ್ರೆಗಳಲ್ಲಿ ಭಕ್ಷ್ಯ ಭೋಜ್ಯ, ಚೋಷ್ಯ ಲೇಹ್ಯ ಪೇಯಾತ್ಮಕವಾದ ನಾನಾವಿಧ ಷಡ್ರಸಾತ್ಮಕವಾದ ಪಾಚಿತಪದಾರ್ಥಗಳನ್ನೂ, ಕಪಿಲವರ್ಣದ ಹಸುವಿನ ತುಪ್ಪವನ್ನೂ, ಮೊಸರು, ಹಾಲು ಮುಂತಾದ ನೈವೇದ್ಯ ಸಾಮಗ್ರಿಗಳನ್ನೂ, ನಾನಾವಿಧ ಪಕ್ವಫಲಗಳನ್ನೂ ಇರಿಸಿ ಮೂಲಮಂತ್ರದಿಂದ ನೋಡಿ, ಓಂ ಐಂ ಹ್ರೀಂ ಶ್ರೀಂ ಐಂ ಹ್ರಃ ಎಂಬ ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ, ಓಂ ಐಂ ಹ್ರೀಂ ಶ್ರೀಂ ಓಂ ಜುಂ ಸಃ ವೌಷಟ್ ಎಂಬ ಮಂತ್ರದಿಂದ ಏಳಾವರ್ತಿ ಅಭಿಮಂತ್ರಿಸಿದ ಜಲದಿಂದ ಪ್ರೋಕ್ಷಣೆಮಾಡಿ ಚಕ್ರ ಮುದ್ರೆಯನ್ನು ಪ್ರದರ್ಶಿಸಬೇಕು. ಎಡಗೈಯನ್ನು ಅಧೋಮುಖವಾಗಿ ಮಾಡಿ ವಾಯುಬೀಜಾತ್ಮಕವಾದ ಓಂ ಐಂ ಹ್ರೀಂ ಶ್ರೀಂ ಯಂ ಎಂಬ ಮಂತ್ರವನ್ನು ಏಳಾವರ್ತಿ ಜಪಮಾಡಿ ನೈವೇದ್ಯ ಸಾಮಗ್ರಿಗಳಲ್ಲಿರುವ ದೋಷಗಳನ್ನು ನಿವಾರಿಸಿ ಬಲಗೈಯನ್ನು ಅಧೋಮುಖವಾಗಿ ಮಾಡಿ ಓಂ ಐಂ ಹ್ರೀಂ ಶ್ರೀಂ ರಂ ಎಂಬ

ಪುಟ ಪಜ್ತಿ

ವಹ್ನಿಬೀಜಾತ್ಮಕವಾದ ಮಂತ್ರದಿಂದ ದೋಷಗಳನ್ನು ದಹಿಸಿ ಓಂ ಐಂ ಹ್ರೀಂ ಶ್ರೀಂ ವಂ ಎಂಬ ಮಂತ್ರದಿಂದ ಧೇನುಮುದ್ರೆಯನ್ನು ಪ್ರದರ್ಶಿಸಿ ನೈವೇದ್ಯವನ್ನು ಅಮೃತಮಯವನ್ನಾಗಿ ಮಾಡಿ, ಮೂಲಮಂತ್ರದಿಂದ ವಿಶೇಷಾರ್ಘ್ಯಜಲದಿಂದ ಪ್ರೋಕ್ಷಿಸಿ,ಪುನಃ ಮೂಲಮಂತ್ರದಿಂದ ಏಳಾವರ್ತಿ ಅಭಿಮಂತ್ರಿಸಿ

೨೪೬- ೩ ಧೇನುಮುದ್ರೆಯನ್ನು ಪ್ರದರ್ಶಿಸುತ್ತಾ ನೈವೇದ್ಯವನ್ನು ಅಮೃತಮಯವನ್ನಾಗಿ ಮಾಡಿದಂತೆ ಭಾವಿಸಿ, ದೇವಿಗೆ ಪಾದ್ಯ, ಅರ್ಘ್ಯ ಆಚಮನೀಯಗಳನ್ನು ಸಮರ್ಪಿಸಿ

ಮೂಲಮಂತ್ರವನ್ನು ಮೂರಾವರ್ತಿ ಉಚ್ಚರಿಸಿ ದೇವಿಗೆ ಸಂತೋಷವಾಗಲೆಂದು ಪ್ರಾರ್ಥಿಸಿ,

ವಿಶೇಷಾರ್ಘ್ಯಪಾತ್ರೆಯ ಜಲವನ್ನು ಬೇರೆಪಾತ್ರೆಯಲ್ಲಿ ಸ್ವಲ್ಪ ಹಾಕಿ ಎಡಗೈ ಹೆಬ್ಬೆಟ್ಟಿನಿಂದ ನೈವೇದ್ಯಸಮರ್ಪಣೆಮಾಡಿ ಕೈಮುಗಿಯಬೇಕು.

೨೪೭- ೪ ಈ ಮಂತ್ರದಿಂದ ದೇವಿಗೆ ಆಪೋಶನವನ್ನು ಹಾಕಿ ಎಡಗೈಯಿಂದ ಗ್ರಾಸಮುದ್ರೆಯನ್ನು ತೋರಿಸುತ್ತಾ ಬಲಗೈಯಿಂದ ಪಂಚ ಪ್ರಾಣಾಹುತಿಮುದ್ರಾಪ್ರದರ್ಶನಪೂರ್ವಕವಾಗಿ ಪ್ರಾಣಾಹುತಿ ಮಂತ್ರಗಳನ್ನು ಉಚ್ಚರಿಸಿ ದೇವಿಯು ನೈವೇದ್ಯಸಮರ್ಪಣೆಯಿಂದ ತೃಪ್ತಿಯನ್ನು ಹೊಂದಲೆಂದು ಪ್ರಾರ್ಥಿಸಬೇಕು.

೨೪೮-೧೩ ಮೇಲಿನ ಮಂತ್ರಗಳನ್ನು ಉಚ್ಚರಿಸಿ ದೇವಿಯು ತೃಪ್ತಿಯನ್ನು ಹೊಂದಲಿ ಎಂದು ಪ್ರಾರ್ಥಿಸಿ ಕೈಗಳಲ್ಲಿ ಪುಷ್ಪಗಳನ್ನು ಧರಿಸಿ ದೇವಿಗೆ ಅರ್ಪಿಸಬೇಕು. ಬಳಿಕ ದೇವಿಗೆ ಅಮೃತಮಯವಾದ ಪಾನೀಯವನ್ನು ಸಮರ್ಪಿಸಿ ದೇವಿಯು ಭೋಜನಮಾಡುತ್ತಿರುವಂತೆ ಮನಸ್ಸಿನಲ್ಲಿ ಭಾವಿಸಿ ಧ್ಯಾನಮಾಡಬೇಕು.

೨೪೯- ೯ ಬಳಿಕ ದೇವಿಗೆ ಹಸ್ತಪ್ರಕ್ಷಾಳನ, ಗಂಡೂಷ, ಪಾದಪ್ರಕ್ಷಾಳನ, ಆಚಮನ ಮೊದಲಾದ ಉಪಚಾರಗಳನ್ನೂ ಮಾಡಿ ತಾಮ್ರದ

ಪುಟ ಪಙ್ತಿ

ಪಾತ್ರೆಯಲ್ಲಿ ಬಲಿಗಾಗಿ ನೈವೇದ್ಯಸಾಮಗ್ರಿಗಳಲ್ಲಿ ಸ್ವಲ್ಪ ಭಾಗವನ್ನು ಇರಿಸಿ ಅದನ್ನು ಅಸ್ತ್ರಮಂತ್ರದಿಂದ ಪ್ರೋಕ್ಷಿಸಿ ಶೋಧಿಸಬೇಕು.

೨೪೯-೧೬ ಅನಂತರ ಓಂ ಐಂ ಹ್ರೀಂ ಶ್ರೀಂ ವನಸ್ಪತಿದೇವತ್ಯಾಯ ತಾಂಬೂಲಾಯ ನಮಃ ಎಂಬ ಮಂತ್ರದಿಂದ ಸಾಮಾನ್ಯಾರ್ಘ್ಯೋದಕದಿಂದ ತಾಂಬೂಲವನ್ನು ಪ್ರೋಕ್ಷಿಸಿ ಕೆಳಗಿನ ಮಂತ್ರದಿಂದ ದೇವಿಗೆ ತಾಂಬೂಲವನ್ನು ಸಮರ್ಪಿಸಬೇಕು

೨೬೦- ೪ ಬಲಿದಾನಂ—ದೇವಿಯ ಮುಂದುಗಡೆ ಬಲಭಾಗದಲ್ಲಿ ಸಾಮಾನ್ಯಾರ್ಘ್ಯೋದಕದಿಂದ ತ್ರಿಕೋಣ ವೃತ್ತ, ಚತುರಶ್ರಾತ್ಮಕವಾದ ಮಂಡಲವನ್ನು ಮಾಡಿ ಅದನ್ನು ಈ ಮಂತ್ರದಿಂದ ಗಂಧಾಕ್ಷತೆಗಳಿಂದ ಪೂಜಿಸಿ ಅದರ ಮೇಲೆ ನೀರು, ಹಾಲು, ಬಲಿ ಇವುಗಳಿಂದ ಅರ್ಧತುಂಬಿದ ಬಲಿಪಾತ್ರೆಯನ್ನು ಇಟ್ಟು

೨೬೦-೧೧ ಈ ಮಂತ್ರವನ್ನು ಮೂರಾವರ್ತಿ ಉಚ್ಚರಿಸಿ ಎಡಗೈಯಿಂದ ತತ್ತ್ವಮುದ್ರೆಯನ್ನು ತೋರಿಸುತ್ತಾ ಬಲಗೈಯಿಂದ ಬಲಿಪಾತ್ರೆಯ ಮೇಲೆ ಸ್ವಲ್ಪ ಉದಕವನ್ನು ಹಾಕಿ ಎಡಗೈಯಿಂದ ಚುಟಿಕೆಹಾಕಿ ಬಾಣಮುದ್ರೆಯನ್ನು ಪ್ರದರ್ಶಿಸಿ ಬಲಿಯು ಭೂತಗಳಿಂದ ಭುಜಿಸಲ್ಪಟ್ಟಿತೆಂದು ಭಾವಿಸಿ ಯೋನಿಮುದ್ರೆಯಿಂದ ನಮಸ್ಕಾರಮಾಡಬೇಕು.

೨೬೫- ೨ ಸುವಾಸಿನೀಪೂಜಾ—ಹಿಂದೆಯೇ ಕರೆದಿದ್ದ ಸುವಾಸಿನಿ (ಮುತ್ತೈದೆ) ಯನ್ನು ಆದರದಿಂದ ಬರಮಾಡಿ, ಆಸುವಾಸಿನಿಯನ್ನು ದೇವಿಯ ರೂಪದಿಂದಿರುವಂತೆ ಭಾವಿಸಿ ಅರ್ಘ್ಯಪಾದ್ಯಾದಿಗಳಿಂದಲೂ ಗಂಧಪುಷ್ಪಾಕ್ಷತೆಗಳಿಂದಲೂ ವಸ್ತ್ರಾದಿಗಳಿಂದಲೂ ಸತ್ಕರಿಸಿ ಭೋಜನಮಾಡಿಸಿ ತಾಂಬೂಲಾದಿಗಳಿಂದ ಸಂತೋಷಪಡಿಸಿ ಕಳುಹಿಸಬೇಕು.

೨೭೧- ೭ ಈ ಶ್ಲೋಕಗಳನ್ನು ಹೇಳಿ ದೇವಿಯ ಎಡಗೈಯಲ್ಲಿ ಜಲವನ್ನು ಹಾಕಿ ಪೂಜಾಸಮರ್ಪಣೆಮಾಡಬೇಕು. ಬಳಿಕ ಶಂಖವನ್ನು

ಪುಟ ಪಙ್ಕ್ತಿ

ಮೇಲಕ್ಕೆತ್ತಿ ಹಿಡಿದುಕೊಂಡು ದೇವಿಯಮೇಲೆ ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಸುತ್ತಿಸಿ ಆ ಶಂಖದಲ್ಲಿರುವ ಜಲದಿಂದ ಮೂಲಮಂತ್ರಪಠನಪೂರ್ವಕವಾಗಿ ಸಾ ಮ ಯ ಕ ರ ನ್ನೂ (ದೇವಿಯ ಭಕ್ತರನ್ನೂ) ತನ್ನನ್ನೂ ಪ್ರೋಕ್ಷಣೆಮಾಡಿ ಶಂಖವನ್ನು ತೊಳೆದು ಕೆಳಗೆ ಇಡಬೇಕು.

ಬಳಿಕ ಮೂಲಮಂತ್ರದಿಂದ ದೇವಿಯ ತೀರ್ಥಪ್ರಸಾದಗಳನ್ನು ಸ್ವೀಕರಿಸಬೇಕು.

೨೭೧-೧೫ ಈ ಮಂತ್ರದಿಂದ ದೇವಿಯ ಕ್ಷಮಾಪಣೆಬೇಡಿ ಸಮಸ್ತಆವರಣ ದೇವತೆಗಳೂ ದೇವಿಯ ಅಂಗದಲ್ಲಿ ಲಯವನ್ನು ಹೊಂದಿದಂತೆ (ಐಕ್ಯವಾದಂತೆ) ಭಾವಿಸಿ ಖೇಚರೀಮುದ್ರೆಯನ್ನು ಪ್ರದರ್ಶಿಸಬೇಕು

೨೭೧-೧೯ ಈ ಮಂತ್ರವನ್ನು ಉಚ್ಚರಿಸಿ ತೇಜೋರೂಪದಿಂದ ಇರುವ ದೇವಿಯನ್ನು ತನ್ನ ಹೃದಯಕಮಲದಲ್ಲಿ ತಂದು ಸೇರಿಸಿ ಅಲ್ಲಿಯೇ ಪಂಚೋಪಚಾರಗಳಿಂದ ಪೂಜೆಮಾಡಿದಂತೆ ಭಾವಿಸಿ ತಾನೂ ದೇವಿಯ ಸಂವಿದ್ರೂಪದಿಂದ ಅಭಿನ್ನವಾಗಿರುವಂತೆ ಭಾವಿಸಿ ಧ್ಯಾನಿಸಬೇಕು.

೨೭೩- ೧ ವಿಶೇಷಾರ್ಘ್ಯೋದ್ವಾಸನಂ—ಮೂಲಮಂತ್ರದಿಂದ ವಿಶೇಷಾರ್ಘ್ಯಪಾತ್ರೆಯನ್ನು ತನ್ನ ಶಿರಸ್ಸಿನವರಿಗೂ ಮೇಲಕ್ಕೆತ್ತಿ ಹಿಡಿದುಕೊಂಡು ಅದರಲ್ಲಿರುವ ಜಲವನ್ನೂ ಸ್ವಲ್ಪ ಹಾಲನ್ನೂ ಬೇರೆ ಪಾತ್ರೆಗೆ ಹಾಕಿ ತೆಗೆದುಕೊಂಡು "ಆರ್ದ್ರಂ ಜ್ವಲತಿ. . ." ಎಂಬ ಮಂತ್ರಪಠನಪುರಸ್ಸರವಾಗಿ ತನ್ನ ಶರೀರದಲ್ಲಿರುವ ಕುಂಡಲಿನೀ ಎಂಬ ಅಗ್ನಿಯಲ್ಲಿ ಹೋಮಮಾಡಿದಂತೆ ಭಾವಿಸಿ ವಿಶೇಷಾರ್ಘ್ಯಪಾತ್ರೆಯನ್ನು ಉದ್ವಾಸನೆಮಾಡಬೇಕು. ಬಳಿಕ ಪೂಜಾಕಾಲದಲ್ಲಿ ಕರೆದಿದ್ದ ಬ್ರಾಹ್ಮಣಸುವಾಸಿನಿ ಮೊದಲಾದವರಿಗೆ ಭೋಜನಮಾಡಿಸಿ ತಾನೂ ಭೋಜನಮಾಡಿ ಇಷ್ಟಬಂದಂತೆ ತನ್ನ ಕಾರ್ಯದಲ್ಲಿ ಪ್ರವೃತ್ತನಾಗಬಹುದು.

# ಪರಿಶಿಷ್ಟ—೩. ಸಚಿತ್ರಮುದ್ರಾಲಕ್ಷಣ

## ॥ ಆವಾಹನಾದಿಷಣ್ಮುದ್ರಾಃ ॥

### ॥ ಆವಾಹನಮುದ್ರಾ ॥



ಹಸ್ತಾಭ್ಯಾಮಂಜಲಿಂ ಬಧ್ವಾನಾಮಿಕಮೂಲಪರ್ವಭಿಃ ।
ಅಂಗುಷ್ಠೌ ನಿಕ್ಷಿಪೇತ್ಸೇಯಂ ಮುದ್ರಾ ತ್ವಾವಾಹನೀ ಮತಾ ॥
ಸಮ್ಯಕ್ಸಂಪೂರಿತಾ ಪುಷ್ಪೈಃ ಕರಾಭ್ಯಾಂ ಕಲಿತಾಂಜಲಿಃ ।
ಆವಾಹನೀ ಸಮಾಖ್ಯಾತಾ ಮುದ್ರಾ ದೈಶಿಕಸತ್ತಮೈಃ ॥

## ॥ ಸ್ಥಾಪನೀಮುದ್ರಾ ॥



ತತಃ ಸಂಸ್ಥಾಪನಂ ಕುರ್ಯಾದಿಹ ತಿಷ್ಠೇತಿ ತಿಷ್ಠ ಚ ।
ಮೂಲಾಂತೇ ದೇವತಾನಾಮ ತಸ್ಯಾಂತೇ ಚ ಪಠೇದಿತಿ ॥
ಆಸ್ಥಾಪನೀಯಮುದ್ರಾಂ ಚ ದರ್ಶಯಿತ್ವಾ ವಿಭಾವಯೇತ್ ।
ಅಧೋಮುಖೀ ತ್ವಿಯಂ ಚೇತ್ಸ್ಯಾತ್ಸ್ಥಾಪನೀಮುದ್ರಿಕಾ ಸ್ಮೃತಾ ॥
ಯಾ ತು ಸ್ಥಿರಾ ದೇವತೇತಿ ಪಶ್ಚಾತ್ಸಂಪ್ರಾರ್ಥಯೇದಿತಿ ।
ದೇವೇಶಿ ಭಕ್ತಿಸುಲಭೇ ಸರ್ವಾಭರಣಸಂಯುತೇ ।
ಯಾವತ್ತ್ವಾಂ ಪೂಜಯಿಷ್ಯಾಮಿ ತಾವತ್ತ್ವಂ ಸುಸ್ಥಿರಾ ಭವ ॥
ಏವಂ ಸಂಪ್ರಾರ್ಥ್ಯ ದೇವೇಶೀಂ ಸನ್ನಿಧಾಪನಮಾಚರೇತ್ ॥

## ॥ ಸನ್ನಿಧಾಪನಮುದ್ರಾ ॥



ಆಶ್ಲಿಷ್ಟಸಮುಷ್ಟಿಯುಗಲಾ ಪ್ರೋನ್ನತಾಂಗುಷ್ಠಯುಗ್ಮಕಾ ।
ಸನ್ನಿಧಾನೇ ಸಮುದ್ದಿಷ್ಟಾ ಮುದ್ರೇಯಂ ತಂತ್ರವೇದಿಭಿಃ ॥
ಮೂಲಮಂತ್ರಂ ಸಮುಚ್ಚಾರ್ಯ ಸಂಬುಧ್ಯೇತ್ತಾಂ ಚ ದೇವತಾಂ ॥
ಇಹ ತ್ವಂ ಸನ್ನಿಧೇಹಿತಿ ದ್ವಿರುಕ್ತ್ವಾ ತಸ್ಯ ಸನ್ನಿಧೌ ।
ಸ್ಥಿತಾಂ ದೇವೀಂ ತೋಷಯೇಚ್ಚ ಸನ್ನಿಧಾಪನಮುದ್ರಯಾ ॥
ದೇವತಾಯಾಸ್ತತಃ ಕುರ್ಯಾನ್ಮೂಲಮುಚ್ಚಾರ್ಯ ಸನ್ನಿಧಿಂ ॥

## ॥ ಸಂರೋಧಿನೀಮುದ್ರಾ ॥



ಸಂಬುಧ್ಯತಾಂ ವದೇತ್ಪಶ್ಚಾತ್ಸನ್ನಿರುದ್ಧಾ ಭವೇತಿ ಚ ।
ದ್ವಿರುಚ್ಚರೇತ್ಕೃಪಾಪೂರ್ಣಾಂ ಭಕ್ತಿಭಾವನಿರೋಧಿತಾಂ ॥
ಪ್ರತಿಮಾಯಾಂ ಸ್ಥಿರಾಯಾತಾಂ ದೇವತಾಮಿತಿ ಚಿಂತಯೇತ್ ।
ಅಂತಃಪ್ರವೇಶಿಕಾಂಗುಷ್ಠಾ ಸ್ಯೈವ ಸಂರೋಧಿನೀ ಮತಾ ॥

## ॥ ಸಂಮುಖೀಕರಣಮುದ್ರಾ ॥



ದೇವತಾಂ ಸಂಮುಖೀಂ ಕುರ್ಯಾನ್ಮೂಲಮಂತ್ರೇಣ ದೈಶಿಕಃ ।
ಸಂಬುಧ್ಯತಾಂ ವದೇತ್ಪಶ್ಚಾತ್ಸಂಮುಖೀ ಭವ ಇತ್ಯಪಿ ।
ಧ್ಯಾಯೇತ್ಸುಸಂಮುಖೀಂ ದೇವೀಂ ಸುಪ್ರಸನ್ನಾನನಾಂಬುಜಾಂ ।
ಸಂಮುಖೀಕರಣೀಂ ಮುದ್ರಾಂ ದರ್ಶಯೇದಿತಿ ಸುಸ್ಮೃತಾಂ ॥
ಉತ್ತಾನಮುಷ್ಟಿಯುಗಲಾ ಸಂಮುಖೀಕರಣೀ ಮತಾ ॥

## ॥ ಅವಕುಂಠನಮುದ್ರಾ ॥



ಮುಷ್ಟಿದ್ವಯಸ್ಯ ತರ್ಜನ್ಯೌ ಪ್ರಸಾರ್ಯಾಧೋಮುಖೀಕೃತೇ ।
ಅನುಲೋಮವಿಲೋಮೇನ ಭ್ರಾಮಿತೇ ದೇವತಾಭಿದಃ ।
ದುಷ್ಟದೃಷ್ಟಿನಿರಾಸಾಯ ಸೈಷಾ ಮುದ್ರಾವಗುಂಠಿನೀ ॥

## ॥ ಸಕಲೀಕರಣಮುದ್ರಾ ॥

ಭಕ್ತ್ಯಾ ಸಂಮೋಹಿತಂ ದೇವಂ ವಿಸ್ಮಯೋತ್ಫುಲ್ಲಲೋಚನಂ ।
ಸಕಲೀಕರಣಂ ಚೈವ ದೇವಸ್ಯ ಹೃದಯಾದಿಷು ।
ಷಡಂಗಮಂತ್ರಾನ್ವಿನ್ಯಸ್ಯ ಮೂಲಮುಚ್ಚಾರ್ಯ ದೇವತಾಂ ।
ಸಂಬುಧ್ಯ ತಾಂ ಚ ಸಕಲೀಕೃತಾ ಭವ ವದೇದಿತಿ ।
ಧ್ಯಾಯೇದಂಗಾನಿ ದೇವೇ ತು ಪ್ರತಿಷ್ಠಾಪ್ಯಾಂಗದೇವತಾಃ ।
ಯಸ್ಮಾದ್ಭಿನ್ನಸ್ವಭಾವಾನಾಂ ಯದಭಿನ್ನಂ ಪ್ರಯೋಜನಂ ।
ಅಂಗಾನಾಮಂಗಿನಾ ಸಾರ್ಧಂ ಸಕಲೀಕರಣಾದ್ಭವೇತ್ ।
ದೇವತಾಂಗೇ ಚ ಷಡಂಗನ್ಯಾಸಃ ಸ್ಯಾತ್ಸಕಲೀಕೃತಿಃ ॥

## ॥ ಧೇನುಮುದ್ರಾ ॥



ಹಸ್ತದ್ವಯೋ ಸ್ತ್ವಧೋವಕ್ತ್ರೇ ಸಂಮುಖೇ ಚ ಪರಸ್ಪರಂ ।
ವಾಮಾಂಗುಲಿರ್ದಕ್ಷಿಣಾನಾಮಂಗುಲೀನಾಂ ಚ ಸಂಧಿಷು ॥
ಸಂವೇಶ್ಯ ಮಧ್ಯಮಾಭ್ಯಾಂ ತು ತರ್ಜನ್ಯಾಂ ದ್ವೇ ಪ್ರಯೋಜಯೇತ್ ।
ಕನಿಷ್ಠೇ ದ್ವೇ ಅನಾಮಾಭ್ಯಾಂ ಯುಂಜ್ಯಾತ್ಸಾ ಧೇನುಮುದ್ರಿಕಾ ॥

## ॥ ಯೋನಿಮುದ್ರಾ ॥



ಸರ್ವಾಂಗುಲೀಸ್ತು ಸಂಯೋಜ್ಯ ಕರಯೋರುಭಯೋರಪಿ ।
ಸಂವೇಷ್ಟ್ಯ ರಜ್ಜುವದ್ವೇತಿ ಪಾಣ್ಯೋರಪಿ ಕನಿಷ್ಠಿಕೇ ॥
ವಾಮಸ್ಯಾನಾಮಮೂಲೇ ವೈ ಉದಗ್ರಂ ವಿನಿಯೋಜಯೇತ್ ।
ದಕ್ಷಸ್ಯ ಮಧ್ಯಮಾಮೂಲೇ ತಥಾಗ್ರಂ ವಾಮಮೇವ ಚ ॥
ಯೋಜಯೇದ್ಯೋಜನಾತ್ಪಶ್ಚಾದಾವರ್ತ್ಯ ಕರಶಾಖಿಕಾಃ ।
ಯೋನ್ಯಾಕಾರಂ ತು ತನ್ಮಧ್ಯಂ ಯೋನಿಮುದ್ರಾ ಪ್ರಕೀರ್ತಿತಾ ॥

## ॥ ಹೃದಯಾದಿಷಡಂಗಮುದ್ರಾಃ ॥

[ಹೃದಯಾದಿಷಡಂಗಾನಾಂ ಮುದ್ರಾ ದೇವತನೌ ಕೃತಾಃ ।
ಸಂಕಲೀಕರಣಾಭಿಖ್ಯಾಃ ಸರ್ವಾವಯವಪೂರ್ತಿದಾಃ ।
ತ್ರಿದ್ವ್ಯೇಕದಶಸಂಖ್ಯಾಕತ್ರಿವೇದಾಂಗುಲಿಭಿಃ ಕ್ರಮಾತ್ ।
ಹೃದಯಾದಿಷಡಂಗಾನಾಂ ಮುದ್ರಾ ಊಹ್ಯಾ ವಿಪಶ್ಚಿತಾ ॥]

## ॥ ಹೃದಯಮುದ್ರಾ ॥



ತರ್ಜನ್ಯಾದಿತ್ರಯೇಣ ಪ್ರಸಾರಿತೇನ ಹೃದಯಂ (ಸ್ಪೃಶೇತ್)

## ॥ ಶಿರೋಮುದ್ರಾ ॥



ಅಂಗುಷ್ಠತರ್ಜನೀಭ್ಯಾಂ ಯೋಜಿತಮುಖಾಭ್ಯಾಮಧೋಗ್ರಾಭ್ಯಾಂ ಶಿರಃ ॥

## ॥ ಶಿಖಾಮುದ್ರಾ ॥



ಪ್ರಸೃತಾಂಗುಷ್ಠೇನಾಧೋಮುಖೇನ ಶಿಖಾ ॥

## ॥ ಕವಚಮುದ್ರಾ ॥



ಕರದ್ವಯದಶಾಂಗುಲಿಭಿಃ ಪ್ರಸೃತಾಭಿಃ ಕವಚಂ ॥

## ॥ ನೇತ್ರಮುದ್ರಾ ॥



ತರ್ಜನ್ಯಾದಿತ್ರಯೇಣ ತ್ರಿಕೋಣಾಗ್ರತುಲ್ಯೇನ ನೇತ್ರಂ ।
ದ್ವಿನೇತ್ರ್ಯಾಂ ತ್ವನಾಮಿಕಾಲೋಪಃ ॥

## ॥ ಅಸ್ತ್ರಮುದ್ರಾ ॥



ಹಸ್ತದ್ವಯಸ್ಯಾಪ್ಯಂಗುಷ್ಠತರ್ಜನೀಭ್ಯಾಂ ಸಶಬ್ದಮಭಿತೋ
ಭ್ರಾಮಿತಾಭ್ಯಾಮಸ್ತ್ರಂ ॥

## ॥ ಆಯುಧಮುದ್ರಾಃ ॥

## ॥ ಬಾಣಮುದ್ರಾ ॥



ಆನಮ್ಯಾಸವ್ಯಹಸ್ತಸ್ಯ ಮಧ್ಯಮಾನಾಮಿಕೇ ತಥಾ ।
ತಯೋಃ ಪೃಷ್ಠಸು ಸಂಯೋಜ್ಯ ಅಂಗುಷ್ಠಾಗ್ರಂ ತತಃ ಪರಂ ।
ಕನಿಷ್ಠಾಂ ತರ್ಜನೀಂ ಚೈವ ಅಗ್ರೇಣಾಯೋಜಯೇತ್ತತಃ ।
ಬಾಣಮುದ್ರಾ ಸಮಾಖ್ಯಾತಾ ಸರ್ವದೇವಸ್ಯ ತುಷ್ಟಿದಾ ॥

## ॥ ಧನುರ್ಮುದ್ರಾ ॥



ಸರ್ವಾಂಗುಲೀಸ್ತು ಸಂಕೋಚ್ಯ ಅಂಗುಷ್ಠಮಥ ತರ್ಜನೀಂ ।
ಪ್ರಸಾರ್ಯ ಕರಯೋಃ ಪಶ್ಚಾದಂಗುಷ್ಠಾಗ್ರಂ ತು ಯೋಜಯೇತ್ ।
ಅಂಗುಷ್ಠಾಗ್ರೇಣ ತರ್ಜನ್ಯಾ ಅಗ್ರೇಣಾಪಿ ಚ ತರ್ಜನೀಂ ।
ಯಥಾಶಕ್ತಿ ಪ್ರಸಾರ್ಯಾಪಿ ಧನುರ್ಮುದ್ರಾ ಪ್ರಕೀರ್ತಿತಾ ॥

## ॥ ಪಾಶಮುದ್ರಾ ॥



ಸಂಯೋಜ್ಯಾಂಗುಷ್ಠಕಾಗ್ರೇ ತು ತರ್ಜನ್ಯಾಗ್ರೇ ಸ್ವಕೇ ಕ್ಷಿಪೇತ್ ।
ಏಷಾ ಪಾಶಾಹ್ವಯಾ ಮುದ್ರಾ ವಿದ್ವದ್ಭಿಃ ಪರಿಕೀರ್ತಿತಾ ॥



## ॥ ಅಂಕುಶಮುದ್ರಾ ॥

ಹಸ್ತಂ ಮುಸಲವತ್ಕೃತ್ವಾ ಮುಷ್ಟಿಮಾಬಧ್ಯ ತರ್ಜನೀಂ ।
ಪ್ರಸಾರ್ಯ ಸಂಕುಚೇತ್ಸೇಯಂ ಮುದ್ರಾ ಸ್ಯಾದಂಕುಶಾಭಿದಾ ॥

## ॥ ತ್ರಿಖಂಡಮುದ್ರಾ ॥

ಪರಿವೃತ್ತಕರೌ ಸ್ಪೃಷ್ಟ್ವಾ ಅಂಗುಷ್ಠೌ ಕಾರಯೇತ್ಸಮೌ ।
ಅನಾಮಾಂತರ್ಗತೇ ಕೃತ್ವಾ ತರ್ಜನ್ಯೌ ಕುಟಿಲಾಕೃತೀ ।
ಕನಿಷ್ಠಿಕೇ ನಿಯುಂಜೀತ ನಿಜಸ್ಥಾನೇ ಮಹೇಶ್ವರಿ ।
ತ್ರಿಖಂಡೇಯಂ ಸಮಾಖ್ಯಾತಾ ತ್ರಿಪುರಾಧ್ಯಾನಕರ್ಮಣಿ ॥

## ॥ ಷೋಡಶೋಪಚಾರಪೂಜಾಮುದ್ರಾಃ ॥

ಆಸನಂ ಸ್ವಾಗತಂ ಪಾದ್ಯಮರ್ಘ್ಯಮಾಚಮನೀಯಕಂ ।
ಮಧುಪರ್ಕಾಚಮನಸ್ನಾನವಸನಾಭರಣಾನಿ ಚ ।
ಸುಗಂಧಸುಮನೋಧೂಪದೀಪನೈವೇದ್ಯಚಂದನಂ ।
ಪ್ರಯೋಜಯೇದರ್ಚನಾಯಾಮುಪಚಾರಾಂಸ್ತು ಷೋಡಶ ॥

## ॥ ಆಸನಮುದ್ರಾ ॥

ಆಸನೇ ಪದ್ಮಮುದ್ರೈವ ಕಥಿತಾ ಮುನಿಭಿಸ್ತಥಾ ।
ಈಷನ್ನಮ್ರಾಂಗುಲಿರ್ದಕ್ಷಃ ಸಂತ್ಯಜ್ಯಾಂಗುಷ್ಠಕಂ ಕರಃ ॥

## ॥ ಸ್ವಾಗತಮುದ್ರಾ ॥

ಸ್ವಾಗತೇ ಸ್ವಸ್ತಿಮುದ್ರಾ ತು ಮಧ್ಯಮೂಲಗತಾಂಗುಲಿಃ ।

## ॥ ಅರ್ಘ್ಯಮುದ್ರಾ ॥

ಸ್ವಸ್ತಿಮುದ್ರಾ ದ್ವಿಹಸ್ತಾ ಚೇನ್ಮುದ್ರಾ ತ್ವರ್ಘ್ಯಸ್ಯ ಕೀರ್ತಿತಾ ।

## ॥ ಪಾದ್ಯಮುದ್ರಾ ॥

ತೌ ಚ ಪ್ರಸಾರಿತೌ ಹಸ್ತೌ ಪಾದ್ಯಮುದ್ರಾ ಪ್ರಕೀರ್ತಿತಾ ॥

## ॥ ಆಚಮನಮುದ್ರಾ ॥

ದೇಶಿನೀಮೂಲಗಾಂಗುಷ್ಠಾ ದಕ್ಷಿಣಾಧಃ ಕನೀಯಸೀ ।
ಆಚಾಮಮುದ್ರಾ ವಿಖ್ಯಾತಾ ದೇವತಾಚಮನೇ ವಿಧೌ ॥

## ॥ ಮಧುಪರ್ಕಮುದ್ರಾ ॥

ಸಂಯುಕ್ತಾನಾಮಿಕಾಂಗುಷ್ಠಾ ತ್ರಿಸೋಽನ್ಯಾಃ ಸಂಪ್ರಸಾರಿತಾಃ ।
ಮಧುಪರ್ಕೇ ಚ ಸಾ ಮುದ್ರಾ ಕಥಿತಾ ವಿಬುಧೋತ್ತಮೈಃ ॥

## ॥ ಸ್ನಾನಮುದ್ರಾ ॥

ಮಧುಪರ್ಕೇ ಚ ಯಾ ಮುದ್ರಾ ಸಂತ್ಯಜ್ಯ ಚ ಕನೀಯಸೀಂ ।
ಕೃತ್ವಾ ಮುಷ್ಟಿಂ ತಥಾ ಸ್ನಾನೇ ಮಧ್ಯಮಾಂಗುಷ್ಠಕೌ ಯುತೌ ॥

## ॥ ವಸ್ತ್ರಮುದ್ರಾ ॥

ಅನ್ಯಾಃ ಪ್ರಸಾರಿತಾಸ್ತಿಸ್ರೋ ಮುದ್ರಾ ವಸ್ತ್ರಸ್ಯ ಚೋದಿತಾಃ ॥

## ॥ ಆಭರಣಮುದ್ರಾ ॥

ಮಧುಪರ್ಕೀಂ ಸಮುತ್ತಾನಾ ಮುದ್ರಾಲಂಕಾರಿಕೀ ಸ್ಮೃತಾ ।

## ॥ ಯಜ್ಞೋಪವೀತಮುದ್ರಾ ॥

ಕನಿಷ್ಠಾಂಗುಷ್ಠಕಾಲಗ್ನಾ ತಿಸ್ರೋ ಮಧ್ಯಾಃ ಪ್ರಸಾರಿತಾಃ ।
ಯಜ್ಞೋಪವೀತಮುದ್ರೇಯಂ ವಿದ್ವದ್ಭಿಃ ಪರಿಕೀರ್ತಿತಾ ॥

## ॥ ಗಂಧಮುದ್ರಾ ॥

ಮುಕ್ತನಿರ್ಮಾಲಿಕಾ ಮುಷ್ಟಿರ್ಗಂಧಮುದ್ರೇತಿ ಸಾ ಸ್ಮೃತಾ ॥

## ॥ ಪುಷ್ಪಮುದ್ರಾ ॥

ಉತ್ಥಿತಾಧೋಮುಖೀ ಮಧ್ಯಾ ಸಾಂಗುಷ್ಠಾಶ್ಚೇತರೇ ತಥಾ ।
ಪುಷ್ಪಮುದ್ರಾ ತದಾಖ್ಯಾತಾ ಸರ್ವಸಿದ್ಧಿಪ್ರದಾಯಿನೀ ॥

## ॥ ಧೂಪಮುದ್ರಾ ॥



ಅಂಗುಷ್ಠಂ ತರ್ಜನೀಲಗ್ನಂ ತಿಸ್ರಃ ಸಂಕುಚಿತಾಃ ಪರಾಃ ।
ಸಾ ಮುದ್ರಾ ಧೂಪದಾನೇ ಸ್ಯಾದ್ದೇವಾನಾಂ ತುಷ್ಟಿಕಾರಿಣೀ ॥

## ॥ ದೀಪಮುದ್ರಾ ॥



ಉನ್ನತಾ ಧಾಪಕೀ ಮುದ್ರಾ ದೀಪಮುದ್ರೇತಿ ಕೀರ್ತಿತಾ ॥

## ॥ ನೈವೇದ್ಯಮುದ್ರಾ ॥



ಪಂಚಾಂಗುಲಾಗ್ರಸಂಲಗ್ನಾ ಪ್ರೋತ್ಥಿತೋರ್ಧ್ವಮುಖೀ ಯದಿ ।
ದ್ವಿಧಾ ನಿಬದ್ಧಾ ಮುದ್ರೇಯಂ ನೈವೇದ್ಯಸ್ಯ ಪ್ರಕೀರ್ತಿತಾ ॥

## ॥ ಪಂಚಪ್ರಾಣಾಹುತಿಮುದ್ರಾಃ ॥

## ॥ ಪ್ರಾಣಮುದ್ರಾ ॥



ತರ್ಜನೀಮಧ್ಯಮಾಂಗುಷ್ಠೈಃ ಪ್ರಾಣಮುದ್ರಾ ಪ್ರಕೀರ್ತಿತಾ ॥



## ॥ ಅಪಾನಮುದ್ರಾ ॥

ಮಧ್ಯಮಾನಾಮಿಕಾಂಗುಷ್ಠೈಃ
ಸ್ಯಾದಪಾನಸ್ಯ ಮುದ್ರಿಕಾ ॥



## ॥ ವ್ಯಾನಮುದ್ರಾ ॥

ಕನಿಷ್ಠಾನಾಮಿಕಾಂಗುಷ್ಠೈರ್ವ್ಯಾನಮುದ್ರಾ ಪ್ರಕೀರ್ತಿತಾ ॥



## ॥ ಉದಾನ ಮುದ್ರಾ ॥

ತರ್ಜನ್ಯನಾಮಿಕಾಂಗುಷ್ಠೈಃ ಸ್ಯಾದುದಾನಸ್ಯ ಮುದ್ರಿಕಾ ।



॥ಸಮಾನ ಮುದ್ರಾ॥

ಸಮಾನಮುದ್ರಾಂಗುಲಿಭಿಃ ಸಂಹತಾಭಿಸ್ತು ಪಂಚಭಿಃ ॥

## ॥ ನಮಸ್ಕಾರಮುದ್ರಾ ॥

ನಾಭೌ ಹೃದಿ ಲಲಾಟೇ ಚ ಕರಸಂಪುಟಯೋರ್ಗತಾ ।
ನಮಸ್ಕಾರೇ ತ್ವಿಯಂ ಮುದ್ರಾ ದೇವತಾನಾಂ ಪ್ರಸೀದತಿ ॥

## ॥ ಪ್ರಾರ್ಥನಮುದ್ರಾ ॥



ಪ್ರಸೃತಾಂಗುಲಿಕೌ ಹಸ್ತೌ ಮಿಥಃ ಶ್ಲಿಷ್ಟೌ ಸುಸಂಮಿತೌ ।
ಕುರ್ಯಾತ್ಸ್ವಹೃದಯೇ ಸೇಯಂ ಮುದ್ರಾ ಪ್ರಾರ್ಥನಸಂಜ್ಞಿಕಾ ॥

॥ ಇತಿ ಷೋಡಶೋಪಚಾರಮುದ್ರಾಃ ॥



॥ ಸರ್ವಾಕರ್ಷಿಣೀಮುದ್ರಾ ॥



॥ ಸರ್ವವಶಂಕರೀಮುದ್ರಾ ॥



॥ ಸರ್ವೋನ್ಮಾದಿನೀಮುದ್ರಾ ॥



॥ ಸರ್ವಮಹಾಂಕುಶಾಮುದ್ರಾ ॥



|| ಸರ್ವಖೇಚರೀಮುದ್ರಾ ||



|| ಸರ್ವಬೀಜಮುದ್ರಾ ||



|| ಸರ್ವಯೋನಿಮುದ್ರಾ ||



|| ಸರ್ವತ್ರಿಖಂಡಮುದ್ರಾ ||



|| ಚಕ್ರಮುದ್ರಾ ||



॥ ಗ್ರಾಸಮುದ್ರಾ ॥



॥ ತತ್ತ್ವಮುದ್ರಾ ॥



॥ ಚತುರಶ್ರಮುದ್ರಾ ॥



॥ ಮುದ್ಗರಮುದ್ರಾ ॥



॥ ಲಿಂಗಮುದ್ರಾ ॥



॥ ಮಹಾಮುದ್ರಾ ॥



॥ ಪುಸ್ತಕಮುದ್ರಾ ॥



॥ ವನಮಾಲಾಮುದ್ರಾ ॥



॥ ಸೌಭಾಗ್ಯದಂಡನೀಮುದ್ರಾ ॥



॥ ಮತ್ಸ್ಯಮುದ್ರಾ ॥



॥ ಕಪಾಲಮುದ್ರಾ ॥

